ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

Monthly News Magazine

Vol-14 | April - 2017 | Issue No. 04 | ₹ 10/-




Sri S.S. Nakul, IAS, Deputy Commissioner, Uttar Kannada Dist, Sri L. Chandrashekar Nayak, IAS Chief Executive Officer, Zilla Panchayat, Uttar Kannada Dist., Sri P.G.R. Sindhia, State Chief Commissioner Bharat Scouts & Guides, Karnataka, Sri P.K. Prakash, Deputy Director of Public Instruction, Sri Ramakrishna U. Nayak, Educational officer, Dr. G. G. Sabhahit, District Chief Commissioner, Sri Sanjay Salunke, President, Karwar Local Association, Sri M.A. Chellaiah, Public Relations Officer & Sri M. Prabakar Bhat, SOC(S) are seen at the Inaugural Function of the State Level Costal Trekking Camp for Rovers & Rangers held on 14th April 2017 at Ranga Mandira, Karwar.





Participants of Rovers & Rangers at the Costal Trekking Camp along with Unit Leaders at Karwar

# ವಿವಿಧ ಜಿಲ್ಲೆಗಳಲ್ಲಿ ನಡೆದ "ವಿಶ್ವ ಜಲ ದಿನಾಚರಣೆ" ಕಾರ್ಯಕ್ರಮಗಳು




ಮಾರ್ಚ್ 22ರಂದು ರಾಯಚೂರಿನಲ್ಲಿ ಜರುಗಿದ "ವಿಶ್ವ ಜಲ ದಿನಾಚರಣೆ" ಕಾರ್ಯಕ್ರಮದಲ್ಲಿ ಶ್ರೀ ಕೈಸರ್ ರಜಾಖ, ನಿವೃತ್ತ ಅಪರ ಜಿಲ್ಲಾಧಿಕಾರಿಗಳು, ಶ್ರೀ ಕೆ. ತಿಮ್ಮಯ್ಯ, ಜಿಲ್ಲಾ ಮುಖ್ಯ ಆಯುಕ್ತರು ಮತ್ತು ಜಿಲ್ಲಾ ಪದಾಧಿಕಾರಿಗಳು ಹಾಗೂ ರೋವರ್ಸ್-ರೇಂಜರ್ಸ್‌ಗಳನ್ನು ಕಾಣಬಹುದು.



ಏಪ್ರಿಲ್ 1 ರಂದು ಮಂಡ್ಯ ಜಿಲ್ಲೆ, ಗೆಜ್ಜಲಗೆರೆ ಸರ್ಕಾರಿ ಪ್ರೌಢಶಾಲೆಯಲ್ಲಿ "ವಿಶ್ವ ಜಲಸಂರಕ್ಷಣಾ ದಿನಾಚರಣೆ"ಯ ಕಾರ್ಯಕ್ರಮವನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀಮತಿ ಮೀರಾಶಿವಲಿಂಗಯ್ಯನವರು ಸಸಿಗೆ ನೀರೆರೆಯುವ ಮೂಲಕ ಉದ್ಘಾಟಿಸಿದರು. ಕಾರ್ಯಕ್ರಮದಲ್ಲಿ ಜಿಲ್ಲಾ ಪದಾಧಿಕಾರಿಗಳು ಮತ್ತು ಸ್ಕೌಟ್ಸ್-ಗೈಡ್ಸ್‌ಗಳನ್ನು ಕಾಣಬಹುದು.



ಉಡುಪಿ ಜಿಲ್ಲಾ ಸಂಸ್ಥೆ ಆಶ್ರಯದಲ್ಲಿ ಜರುಗಿದ "ನೀರು ಉಳಿಸಿ-ಕರ್ನಾಟಕ ಉಳಿಸಿ" ಕಾಯಕ್ರಮದಲ್ಲಿ ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಕೆ.ಜಿ. ರಾವ್ ಅವರು ಸ್ಕೌಟ್‌ಗಳಿಗೆ ನೀರು ಉಳಿಸುವ ಬಗ್ಗೆ ಮಾಹಿತಿ ನೀಡುತ್ತಿರುವುದು.



ಮಾರ್ಚ್ 22ರಂದು ಕೋಲಾರ ಜಿಲ್ಲೆಯ ವೇಮಗಲ್ ಹೋಬಳಿ ಕೇಂದ್ರದಲ್ಲಿ "ವಿಶ್ವ ಜಲದಿನಾಚರಣೆ" ಪ್ರಯುಕ್ತ ಸಾರ್ವಜನಿಕರಿಗೆ ಜಾಗೃತಿ ಮೂಡಿಸುತ್ತಿರುವುದು.



ತುಮಕೂರು ಜಿಲ್ಲಾ ಸಂಸ್ಥೆ ಆಶ್ರಯದಲ್ಲಿ ಜರುಗಿದ ತೃತೀಯ ಸೋಪಾನ ತರಬೇತಿ ಶಿಬಿರದಲ್ಲಿ ಭಾಗವಹಿಸಿದ್ದ ಶಿಬಿರದ ನಾಯಕರು, ಸಿಬ್ಬಂಧಿ ವರ್ಗ ಹಾಗೂ ಸ್ಕೌಟ್ಸ್‌ಗಳನ್ನು ಕಾಣಬಹುದು.



ಏಪ್ರಿಲ್ 17 ರಿಂದ 19ರ ವರೆಗೆ ಡಾ. ವಿ.ಎಸ್. ಆಚಾರ್ಯ ಜಿಲ್ಲಾ ತರಬೇತಿ ಕೇಂದ್ರ, ಉಡುಪಿಯಲ್ಲಿ ಜರುಗಿದ ತೃತೀಯ ಸೋಪಾನ ಹಾಗೂ ರಾಜ್ಯ ಪುರಸ್ಕಾರ ಪೂರ್ವಭಾವಿ ತರಭೇತಿ ಶಿಬಿರದಲ್ಲಿ ಭಾಗವಹಿಸಿದ ಸ್ಕೌಟ್ಸ್-ಗೈಡ್ಸ್‌ಗಳ ವಿಹಾಂಗಮ ನೋಟ.

# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

*Monthly News Magazine*




ಸಂಚಿಕೆಯ ವಾರ್ಷಿಕ ಚಂದಾ ರೂ. 100 / -
ವಿದ್ಯಾಸಂಸ್ಥೆ ಹಾಗೂ ಸಂಘ-ಸಂಸ್ಥೆಗಳಿಗೆ
ವಾರ್ಷಿಕ ಚಂದಾ ರೂ. 100 / - ಚಂದಾಹಣವನ್ನು
ಸಂಪಾದಕರು, ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ರಾಜ್ಯ ಕೇಂದ್ರ ಕಛೇರಿ, ಶಾಂತಿಗೃಹ # 39
ಅರಮನೆ ರಸ್ತೆ, ಬೆಂಗಳೂರು-560 001
ದೂ: 080-2226 0017, 2226 7470
ಇಲ್ಲಿಗೆ ಕಳುಹಿಸಲು ಕೋರಿದೆ.


**ಪರಿವಿಡಿ**




ನಮ್ಮ ಸಂಸ್ಥೆಯ ವೆಬ್‌ಸೈಟ್:
www.bsgkarnataka.org
www.kondajjibasappa.org
www.kondajjibasappa.com

ನಮ್ಮ ಸಂಸ್ಥೆಯ ಫೇಸ್‌ಬುಕ್:
The Bharat Scouts-Guides Karnataka




# ರಾಜ್ಯ ಮುಖ್ಯ ಆಯುಕ್ತರ ನುಡಿ

ಪ್ರಿಯ ಓದುಗ ಬಂಧುಗಳೇ
ಸಸ್ನೇಹ ನಮಸ್ಕಾರಗಳು



ನಿಮ್ಮಲ್ಲಿ ಹಲವರಿಗೆ ಪರೀಕ್ಷೆ ಈಗಾಗಲೇ ಮುಗಿದಿದೆ. ಕೆಲವರಿಗೆ ಫಲಿತಾಂಶಗಳೂ ಬಂದಿದೆ. ಪರೀಕ್ಷೆಗಳಲ್ಲಿ ಯಶಸ್ವಿಯಾಗಿ ಮುಂದಿನ ತರಗತಿಗಳಿಗೆ ಹೆಜ್ಜೆ ಇಡುತ್ತಿರುವ ಮಕ್ಕಳನ್ನು ನಾನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಹೊಸ ಶೈಕ್ಷಣಿಕ ವರ್ಷವು ಹೊಸ ಅರಿವಿನ ಅನ್ವೇಷಣೆಯೆಂದು ನೀವು ಭಾವಿಸಬೇಕು. ಓದು ಕೇವಲ ಪರೀಕ್ಷೆಯಲ್ಲಿ ತೇರ್ಗಡೆಯಾಗಲು ಮಾತ್ರವಲ್ಲ, ಅದು ನಮ್ಮ ಅರಿವಿನ ಪರಿಧಿಯನ್ನು ಹೆಚ್ಚಿಸಿ ಉತ್ತಮ ವ್ಯಕ್ತಿ ಮತ್ತು ಉತ್ತಮ ನಾಗರೀಕರನ್ನಾಗಿ ರೂಪಿಸಬೇಕು. ಈ ಘನ ಕಾರ್ಯದಲ್ಲಿ ವಿದ್ಯಾರ್ಥಿಗಳಿಗಿಂತ ಹೆಚ್ಚಿನ ಜವಬ್ದಾರಿ ಅಧ್ಯಾಪಕರದ್ದು, ಪೋಷಕರದ್ದು ಮತ್ತು ಸಮಾಜದಲ್ಲಿ ವಿವಿಧ ಸ್ಥಾನಗಳಲ್ಲಿರುವ ಹಿರಿಯರದ್ದು.

ಇನ್ನೂ ಕೆಲವು ಫಲಿತಾಂಶಗಳು ಬರಬೇಕಾಗಿದೆ. ಎಸ್.ಎಸ್.ಎಲ್.ಸಿ ಮತ್ತು ಪಿ.ಯು.ಸಿ. / 12ನೇ ತರಗತಿಯ ಮಕ್ಕಳ ಫಲಿತಾಂಶಗಳು ಅವರ ಮುಂದಿನ ವೃತ್ತಿ ಜೀವನದ ಮೇಲೆ ಪರಿಣಾಮವನ್ನು ಉಂಟುಮಾಡಬಹುದು. ಪರೀಕ್ಷೆಯ ಫಲಿತಾಂಶವು ಏನೇ ಇರಲಿ, ವಿದ್ಯಾರ್ಥಿಗಳು ಧೃತಿಗೆಡದೆ ಅಧ್ಯಯನವನ್ನು ಮುಂದುವರೆಸಬೇಕು. ಪೋಷಕರು ಈ ಫಲಿತಾಂಶದ ಮೇಲೆಯೇ ಮಕ್ಕಳ ಮುಂದಿನ ಬದುಕು ನಿಂತಿರುತ್ತದೆ ಎಂದು ಭಾವಿಸದೆ ಮಕ್ಕಳ ಸರ್ವತೋಮುಖ ಅಭಿವೃದ್ಧಿಗೆ ಅವಕಾಶ ಮಾಡಿಕೊಡಬೇಕು.

ತರಗತಿಗಳು ಪ್ರಾರಂಭವಾಗುತ್ತಿದ್ದಂತೆ ಸ್ಕೌಟ್ಸ್ ಗೈಡ್ಸ್‌ನ ಚಟುವಟಿಕೆಗಳು ಚುರುಕಾಗಿ ಆರಂಭವಾಗಬೇಕು. ಈಗಾಗಲೇ ರಾಜ್ಯ ಮತ್ತು ಪ್ರತಿಯೊಂದು ಜಿಲ್ಲಾ ಸಂಸ್ಥೆಗಳು ತಮ್ಮ ವಾರ್ಷಿಕ ಚಟುವಟಿಕೆಗಳ ಯೋಜನೆಯನ್ನು ಸಿದ್ಧಪಡಿಸಿವೆ. ನಮಗೆ ಹೊಸ ಅವಕಾಶಗಳು ದೊರೆಯುತ್ತಿದೆ. ಅದನ್ನು ಚೆನ್ನಾಗಿ ಬಳಸಿಕೊಳ್ಳುವುದು ನಮ್ಮ ಜವಾಬ್ದಾರಿಯಾಗಿದೆ. 2016-17ನೇ ಸಾಲಿನ ನಿಜ ಗಣತಿಯನ್ನು ಗಮನಿಸಿದಾಗ ನಾವು ಇನ್ನೂ ಹಲವಾರು ಜಿಲ್ಲೆಗಳಲ್ಲಿ ಮತ್ತಷ್ಟು ಪ್ರಗತಿಯನ್ನು ಸಾಧಿಸಬೇಕಾಗಿದೆ.

ಕರ್ನಾಟಕದಲ್ಲಿ ಸ್ಕೌಟ್ ಗೈಡ್ ಚಳವಳಿಯ ಬೆಳವಣಿಗೆಗೆ ವಿಪುಲ ಅವಕಾಶಗಳಿದೆ. ಸರ್ಕಾರ ಮತ್ತು ಸಾರ್ವಜನಿಕರಿಂದ ನಮ್ಮ ಚಟುವಟಿಕೆಗಳಿಗೆ ಬಹಳ ಪ್ರೋತ್ಸಾಹ ದೊರೆತಿದೆ. ಕಳೆದ ವರ್ಷ ಚಾರಿತ್ರಿಕವಾದ ಹದಿನೇಳನೆಯ ರಾಷ್ಟ್ರೀಯ ಜಾಂಬೂರಿಯನ್ನು ಯಶಸ್ವಿಯಾಗಿ ನಡೆಸಿದ ಹಿನ್ನೆಲೆಯಿದೆ. ನಮ್ಮ ತರಬೇತಿ ಶಿಬಿರಗಳು ಇನ್ನಿತರ ಚಟುವಟಿಕೆಗಳು 2016-17ರ ಸಾಲಿನಲ್ಲಿ ಕಾರ್ಯಸೂಚಿಯ ಅನ್ವಯ ನಡೆದಿದೆ. 2017-18ರಲ್ಲಿ ಗಣತಿಯು ಗುರಿಯನ್ನು ದಾಟಬೇಕು. ಇದನ್ನು ಸಾಧಿಸಲು ನಾವೆಲ್ಲರೂ ಕೂಡಿ ಸಂಕಲ್ಪ ಮಾಡಬೇಕು.



ಹಿಂದಿನ ಸಂಚಿಕೆಗಳಲ್ಲಿ ನಾನು ಸ್ಕೌಟ್ ಚಳವಳಿಯ ಬಗ್ಗೆ ಕೆಲವು ಚಿಂತನೆಗಳನ್ನು ನಿಮ್ಮ ಮುಂದಿರಿಸಿದ್ದೇನೆ. ನಮ್ಮ ಚಳವಳಿಯ ಬಗ್ಗೆ ಮಹಾತ್ಮಗಾಂಧಿರವರು **"ಭಾರತದ ಪ್ರತಿಯೊಂದು ಮನೆಯಲ್ಲೂ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಂತಹ ಮಕ್ಕಳಿರಬೇಕೆಂದು ನಾನು ಅಪೇಕ್ಷಿಸುತ್ತೇನೆ"** ಎಂದಿದ್ದಾರೆ.



ಅಂತೆಯೇ ಭಾರತದ ಪ್ರಥಮ ಪ್ರಧಾನಿ ಜವಹರಲಾಲ್ ನೆಹರೂರವರು **"ನನ್ನ ದೃಷ್ಟಿಯಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಅತ್ಯುತ್ತಮ ಆಸ್ತಿ, ಅವರು ಹೆಚ್ಚು ವಿಕಾಸಗೊಂಡಷ್ಟು ರಾಷ್ಟ್ರಕ್ಕೆ ಹೆಚ್ಚು ಒಳಿತಾಗುತ್ತದೆ"** ಎಂದಿದ್ದಾರೆ.



ಡಾ॥ ಅನಿಬೆಸೆಂಟ್‌ರವರು **"ನನಗೇನಾದರೂ ಒಂದು ಡಜನ್ ಮಕ್ಕಳಿದ್ದಿದ್ದರೆ ಅವರಲ್ಲಿ ಪ್ರತಿಯೊಬ್ಬರನ್ನು ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಗೆ ಕಳುಹಿಸುತ್ತಿದ್ದೆ"** ಎಂದಿದ್ದಾರೆ. ಈ ಮಾತುಗಳು ಮನನೀಯ ಮತ್ತು ಅರ್ಥಪೂರ್ಣವಾದುದು. ಸ್ಕೌಟ್ ಚಳವಳಿಯನ್ನು ಅತಿ ಹೆಚ್ಚಿನ ಜನರಿಗೆ ತಲುಪಿಸುವುದು ನಮ್ಮ ಜವಾಬ್ದಾರಿಯಾಗಿದೆ.

ಕರ್ನಾಟಕ ರಾಜ್ಯದ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ರಾಜ್ಯ ಮುಖ್ಯ ಆಯುಕ್ತನಾಗಿ ಆಯ್ಕೆಯಾದ ದಿನದಿಂದಲೂ ಸಂಸ್ಥೆಯ ಸರ್ವತೋಮುಖ ಅಭಿವೃದ್ಧಿಯ ಕಡೆಗೆ ನಾನು ಗಮನಹರಿಸಿದ್ದೇನೆ. ಪ್ರತಿ ತಿಂಗಳು ತಪ್ಪದಂತೆ 8–10 ದಿನಗಳು ಪ್ರವಾಸ ಮಾಡುತ್ತೇನೆ. ಸಂಸ್ಥೆಯ ಚಟುವಟಿಕೆಗಳಲ್ಲಿ ಭಾಗವಹಿಸುವುದು, ಮಕ್ಕಳನ್ನು, ಪದಾಧಿಕಾರಿಗಳನ್ನು ಭೇಟಿಮಾಡಿ ಅವರೊಂದಿಗೆ ಚರ್ಚಿಸುವುದು, ಪ್ರವಾಸಗಳ ಉದ್ದೇಶವಾಗಿದೆ. ವೈಯಕ್ತಿಕವಾಗಿ ಸ್ಕೌಟ್ ಗೈಡ್‌ಗಳೊಂದಿಗೆ ಸಂವಹನ ನನಗೆ ಸಂತೋಷವನ್ನು ನೀಡುತ್ತದೆ. ಈ ಪ್ರವಾಸಗಳು ಇನ್ನೂ ಹೆಚ್ಚಿನ ಫಲಿತಾಂಶವನ್ನು ನೀಡಬೇಕು, ಚಟುವಟಿಕೆಗಳೊಂದಿಗೆ ಗಣತಿಯೂ ಹೆಚ್ಚಬೇಕೆಂಬುದು ನನ್ನ ಆಶಯವಾಗಿದೆ.

ಮಾರ್ಚ್–ಏಪ್ರಿಲ್ ತಿಂಗಳಿನಲ್ಲಿ ನಾನು ದೀರ್ಘ ಪ್ರವಾಸಗಳನ್ನು ಮಾಡಿದ್ದೇನೆ. ತುಮಕೂರು, ಹಾಸನ, ದಕ್ಷಿಣ ಕನ್ನಡ, ಉಡುಪಿ, ಕಾರವಾರ, ಶಿರಸಿ, ದಾವಣಗೆರೆ, ದೊಡ್ಡಬಳ್ಳಾಪುರ, ಬೀದರ್, ಕಲ್ಬುರ್ಗಿ, ಯಾದಗಿರಿ ಜಿಲ್ಲೆಗಳಲ್ಲಿ ಪ್ರವಾಸ ಮಾಡಿ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳನ್ನು ಭೇಟಿ ಮಾಡಿ ಕಾರ್ಯಕ್ರಮ, ತರಬೇತಿ ಮತ್ತು ಇನ್ನಿತರ ಚಟುವಟಿಕೆಗಳ ಬಗ್ಗೆ ಚರ್ಚಿಸಿದ್ದೇನೆ.

ಏಪ್ರಿಲ್ 14, 2017 ರಿಂದ 5 ದಿನಗಳ ಕಾಲ ಕಾರವಾರದಲ್ಲಿ ನಡೆದ ರಾಜ್ಯ ಮಟ್ಟದ ರೋವರ್ಸ್ ಮತ್ತು ರೇಂಜರ್ಸ್ ವಿದ್ಯಾರ್ಥಿಗಳ ಕಡಲ ತೀರದ ಚಾರಣ ಹಾಗೂ ಪ್ರಕೃತಿ ಅಧ್ಯಯನ ಶಿಬಿರ, ಏಪ್ರಿಲ್ 16ರಂದು ಹಾವೇರಿಯಲ್ಲಿ ನಡೆದ ರಾಜ್ಯ ಪುರಸ್ಕಾರ ಪೂರ್ವಸಿದ್ಧತಾ ಶಿಬಿರ (ಶಿಬಿರಾರ್ಥಿಗಳು: 200) ಏಪ್ರಿಲ್ 17ರಂದು ಬೆಂಗಳೂರು ದಕ್ಷಿಣ ಜಿಲ್ಲೆಯವರು ನಡೆಸಿದ ತೃತೀಯ ಚರಣ, ತೃತೀಯ ಸೋಪಾನ, ಹೀರಕ್ ಪಂಖ್, ರಾಜ್ಯ ಪುರಸ್ಕಾರ ಪೂರ್ವಸಿದ್ಧತಾ ತರಬೇತಿ ಶಿಬಿರಗಳು (ಶಿಬಿರಾರ್ಥಿಗಳು: 700) ಪ್ರಮುಖವಾದವು.



ಇದಲ್ಲದೆ, ಉಡುಪಿಯಲ್ಲಿ ಡಾ॥ ವಿ.ಎಸ್. ಆಚಾರ್ಯ ತರಬೇತಿ ಕೇಂದ್ರದ ಅಭಿವೃದ್ಧಿ, ಈ ವರ್ಷದ ನವೆಂಬರ್–ಡಿಸೆಂಬರ್ ತಿಂಗಳಿನಲ್ಲಿ ಮಂಗಳೂರಿನಲ್ಲಿ ನಡೆಯಲಿರುವ 28ನೆಯ ರಾಜ್ಯ ಜಾಂಬೋರೇಟ್ ಸಿದ್ಧತೆ, 2018ರಲ್ಲಿ ಶ್ರವಣಬೆಳಗುಳದಲ್ಲಿ ನಡೆಯಲಿರುವ ಮಹಾಮಸ್ತಕಾಭಿಷೇಕದ ಸಂದರ್ಭದಲ್ಲಿ ಸ್ಕೌಟ್ಸ್ ಸಂಸ್ಥೆಯ ವತಿಯಿಂದ ನಾವು ನಿರ್ವಹಿಸಬೇಕಾದ ಜವಾಬ್ದಾರಿಗಳ ಬಗ್ಗೆ ಸಂಬಂಧಿಸಿದ ಜಿಲ್ಲಾ ಸಂಸ್ಥೆಗಳ ಪದಾಧಿಕಾರಿಗಳೊಂದಿಗೆ ವಿಸ್ತೃತವಾಗಿ ಚರ್ಚಿಸಿದ್ದೇನೆ. ಧರ್ಮಸ್ಥಳದಲ್ಲಿ ಶ್ರೀ ವೀರೇಂದ್ರ ಹೆಗ್ಗಡೆರವರು 17ನೆಯ ರಾಷ್ಟ್ರೀಯ ಜಾಂಬೂರಿಯನ್ನು ನಮ್ಮ ಸಂಸ್ಥೆಯು ಯಶಸ್ವಿಯಾಗಿ ಸಂಘಟಿಸದಕ್ಕಾಗಿ ಹೃತ್ಪೂರ್ವಕವಾಗಿ ಅಭಿನಂಧಿಸಿದರು. ಅವರ ಬೆಂಬಲ ನಮಗೆ ಹೆಚ್ಚಿನ, ಜವಬ್ದಾರಿಯನ್ನು ಕೊಟ್ಟಿದೆ.

ಕಾರವಾರದಲ್ಲಿ ನಡೆದ ಪ್ರಕೃತಿ ಅಧ್ಯಯನ ಶಿಬಿರದ ನೇತೃತ್ವವನ್ನು ಉತ್ತರ ಕನ್ನಡ ಜಿಲ್ಲಾಧಿಕಾರಿಗಳಾದ ಶ್ರೀ ಎಸ್.ಎಸ್. ನಕುಲ್, ಭಾ.ಆ.ಸೇ., ಮತ್ತು ಶ್ರೀ ಎಲ್. ಚಂದ್ರಶೇಖರ್ ನಾಯಕ್, ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯ್ತಿ, ಉತ್ತರ ಕನ್ನಡ, ಇವರು ವಹಿಸಿದ್ದರು. ಇವರಿಗೆ ವಿಶೇಷವಾದ ಧನ್ಯವಾದಗಳು. ಶ್ರೀ ಪಿ.ಕೆ. ಪ್ರಕಾಶ್, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಕಾರವಾರ, ಮತ್ತು ಶ್ರೀ ರಾಮಕೃಷ್ಣ, ಕ್ಷೇತ್ರ ಶಿಕ್ಷಣಾಧಿಕಾರಿಗಳ ಸಹಕಾರಕ್ಕೆ ನಾನು ಧನ್ಯವಾದಗಳನ್ನು ಅರ್ಪಿಸುತ್ತೇನೆ. ಇವರು ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿ ಬೆಳೆಯಲು ವಿಶೇಷವಾದ ಕಾಳಜಿಯನ್ನು ವಹಿಸಿದ್ದಾರೆ.






ಬೆಂಗಳೂರು ಮತ್ತು ಕರ್ನಾಟಕದ ಇತರ ಕಡೆ ಕುಡಿಯುವ ನೀರಿಗೆ ತೀವ್ರವಾದ ಅಭಾವವಿದೆ. ನೀರನ್ನು ಮಿತವಾಗಿ ಬಳಸಬೇಕು, ಉಳಿಸಬೇಕು ಎಂಬ ಜಾಗೃತಿಯನ್ನು ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ಸಹಕಾರದೊಂದಿಗೆ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಪ್ರಯತ್ನಿಸುತ್ತಿದ್ದಾರೆ. ಬೆಂಗಳೂರು ದಕ್ಷಿಣ ಮತ್ತು ಬೆಂಗಳೂರು ಉತ್ತರ ಜಿಲ್ಲೆಗಳು ಹಲವಾರು ಶಾಲೆಗಳಲ್ಲಿ ಜಾಗೃತಿ ಶಿಬಿರಗಳನ್ನು ಏರ್ಪಡಿಸಿದ್ದಾರೆ. ನಮ್ಮ ಸಂಸ್ಥೆಯ ಜಿಲ್ಲಾ/ತಾಲ್ಲೂಕು ಪದಾಧಿಕಾರಿಗಳು ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದಾರೆ. ನಾವುಗಳು ಸಮರೋಪಾಧಿಯಲ್ಲಿ ನೀರಿನ ಉಳಿತಾಯ ಮತ್ತು ಮಿತಬಳಕೆಯ ಬಗ್ಗೆ ಸಾರ್ವಜನಿಕರಿಗೆ ಅರಿವನ್ನುಂಟುಮಾಡಬೇಕು.

ಏಪ್ರಿಲ್ 24ರಂದು ನಡೆದ ಕಾರ್ಯಕಾರಿಣಿ ಸಭೆಯಲ್ಲಿ 2017 ಮತ್ತು 18ರ ಚಟುವಟಿಕೆಗಳ ಬಗ್ಗೆ ವಿವರವಾದ ಯೋಜನೆಯನ್ನು ರೂಪಿಸಲಾಗಿದೆ. ಬಾಲಕ–ಬಾಲಕಿಯರಿಗಾಗಿ 55 ಕಾರ್ಯಕ್ರಮಗಳನ್ನು ಯುವಕರಿಗಾಗಿ 45 ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ. ಇದಲ್ಲದೆ ನಮ್ಮ ವಿವಿಧ ತರಬೇತಿ ಕೇಂದ್ರಗಳನ್ನು ಅಭಿವೃದ್ಧಿಗೊಳಿಸಲು ಬೇಕಾದ ಅಗತ್ಯ ಕ್ರಮಗಳನ್ನು ಕೈಗೊಳ್ಳಲು ನಿರ್ಧರಿಸಲಾಗಿದೆ. ಏಪ್ರಿಲ್ 10 ರಿಂದ ಆರಂಭವಾಗಿರುವ ಈ ಶೈಕ್ಷಣಿಕ ವರ್ಷದ ಎಲ್ಲಾ ಕಾರ್ಯಕ್ರಮಗಳು ಯಶಸ್ವಿಯಾಗಲು ತಮ್ಮ ಸಹಕಾರವನ್ನು ಕೋರುತ್ತೇನೆ.



ಈ ತಿಂಗಳ 29 ರಂದು ಬಸವ ಜಯಂತಿ. ಹನ್ನೆರಡನೆ ಶತಮಾನದಲ್ಲಿಯೇ ನಮ್ಮ ಸಮಾಜದಲ್ಲಿದ್ದ ತಾರತಮ್ಯ, ಶ್ರೇಣಿಕೃತ ವ್ಯವಸ್ಥೆ, ಶೋಷಣೆಗಳ ವಿರುದ್ಧ ಬಂಡಾಯವೆದ್ದು, ಹೊಸ ಜೀವನ ವಿಧಾನದ ದಾರಿಯನ್ನು ತೋರಿದವರು ಬಸವಣ್ಣನವರು. ಒಬ್ಬ ಸಮಾಜ ವಿಜ್ಞಾನಿಯಾಗಿ ಬಸವಣ್ಣನವರು ಪ್ರಖರ ವೈಚಾರಿಕತೆ, ಸಾತ್ವಿಕ ಪ್ರತಿಭಟನೆ ಮತ್ತು ಪ್ರಗತಿಪರ ಧೋರಣೆಗಳಿಂದ ಸಮಸಮಾಜದ ನಿರ್ಮಾಣಕ್ಕಾಗಿ ಹೋರಾಟ ಮಾಡಿದರು. ವಿಶ್ವವು ಕಂಡ ಮಹಾಮಾನವತಾವಾದಿ ಅವರು. ಅವರ ನಂತರದ ಎಂಟು ಶತಮಾನಗಳಲ್ಲಿ ಸಮಾಜವು ಎಷ್ಟು ಪರಿವರ್ತನೆಯಾಗಿದೆ, ಅವರ ಆಸೆ, ಕಲ್ಪನೆಗಳು ಸಾಕಾರಗೊಂಡಿವೆಯೇ ಎಂಬುದರ ಬಗ್ಗೆ ತೀವ್ರವಾಗಿ ನಾವು ವಿವೇಚಿಸಬೇಕಾಗದ ಸಮಯವಿದು.

ಮೇ ಒಂದು, ವಿಶ್ವ ಕಾರ್ಮಿಕರ ದಿನ. 1886ರಲ್ಲಿ ಚಿಕಾಗೊದಲ್ಲಿ ನಡೆದ ಕಾರ್ಮಿಕರ ಬೃಹತ್ ಪ್ರತಿಭಟನೆಯಲ್ಲಿ ಹಲವಾರು ಸಾವು ನೋವುಗಳಾದವು. ಪ್ರತಿಭಟನೆಯ ನೇತಾರರನ್ನು ಗಲ್ಲಿಗೇರಿಸಲಾಯಿತು. ಕಾರ್ಮಿಕರ ಬೇಡಿಕೆ ನಿಗಧಿತ ಕೆಲಸದ ಅವಧಿ. ಕಳೆದೊಂದು ಶತಮಾನದಲ್ಲಿ ಕಾರ್ಮಿಕರ ಸೇವಾ ಸೌಲಭ್ಯಗಳು ಮತ್ತು ನಿಯಮಗಳಲ್ಲಿ ಸಾಕಷ್ಟು ಪ್ರಗತಿಯನ್ನು ಸಾಧಿಸಲಾಗಿದೆ. ಆದರೂ, ಸಾಧಿಸಬೇಕದ್ದು ಬಹಳಷ್ಟಿದೆ ಎಂದು ನನಗನ್ನಿಸುತ್ತದೆ.



ನೂರ ಹತ್ತು ವಸಂತಗಳನ್ನು ಕಂಡ ತುಮಕೂರಿನ ಸಿದ್ಧಗಂಗಾ ಮಠದ ಪರಮಪೂಜ್ಯ ಶ್ರೀ ಶಿವಕುಮಾರ ಮಹಾ ಸ್ವಾಮಿಗಳನ್ನು, ತೊಂಬತ್ತೊಂಬತ್ತು ವಸಂತಗಳನ್ನು ಕಂಡ ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಶ್ರೀ ಎಚ್.ಎಸ್.ದೊರೆಸ್ವಾಮಿರವರನ್ನು ಅವರ ಹುಟ್ಟು ಹಬ್ಬದ ಸಂದರ್ಭದಲ್ಲಿ ಭೇಟಿಯಾಗಿ ಅಭಿನಂದಿಸಿದೆ. ಈ ಇಬ್ಬರು ಹಿರಿಯರು ನಮ್ಮ ಚಟುವಟಿಕೆಗಳಿಗೆ ಸ್ಫೂರ್ತಿದಾತರು. ಆರೋಗ್ಯ ಪೂರ್ಣವಾಗಿ ದೀರ್ಘಕಾಲ ಬಾಳಲಿ, ಕಿರಿಯರಿಗೆ ಮಾರ್ಗದರ್ಶನ ನೀಡಲಿ ಎಂದು ಭಗವಂತನಲ್ಲಿ ಪ್ರಾರ್ಥಿಸುತ್ತೇನೆ.



ಹೊಸವರ್ಷ, ಹೊಸ ಸವಾಲುಗಳು, ಹೊಸ ಸಾಧನೆಗಳು ನಮ್ಮದಾಗಲಿ.

"ಒಗ್ಗಟ್ಟಿನಿಂದ ನಾಳಿನ ಸುದಿನದೆಡೆಗೆ ಹೆಜ್ಜೆ ಹಾಕೋಣ"

ಸ್ಕೌಟ್ಸ್ ಮತ್ತು ಗೈಡ್ಸ್ ವಂದನೆಗಳೊಂದಿಗೆ.

ತಮ್ಮ ವಿಶ್ವಾಸಿ

ಪಿ.ಜಿ.ಆರ್. ಸಿಂಧ್ಯ

ರಾಜ್ಯ ಮುಖ್ಯ ಆಯುಕ್ತರು



# "SAVE WATER – SAVE BENGALURU" AWARENESS CAMPAIGN

## By Scouts, Guides, Rovers and Rangers

The Bharat Scouts & Guides Karnataka in Association with Bengaluru South District Organised " Save Water- Save Bengaluru" Awareness Campaign at different Areas in Bengaluru during April 2017.



### Vijayanagar Local Association :

The Campaign was Flaged off by Sri M.A. Chellaiah, Public Relation Officer, on 8th April 2017 in the presence of Dr. G. Upakari Rani, Principal New Cambridge High School, R.P.C. Layout, Vijayanagar Sri S.G. Shivaram, Asst. Executive Engineer, BWSSB, W.I. Sub-Division, R.P.C., Layout, Sri Siddagangaiah, Secretary, Local Association, Sri Thippeswamy, Scout Master, Unit Leaders and 200 Scouts and Guides were present during the campaign. The Scouts-Guides visited many houses and interacted with the Head of the family and other Members of the Family for the use of water during the Summer. Many of the Family Members were happy to see the Scouts and Guides visiting their Houses and the promised to save water during this summer they undertake the campaign from 8th to 10th April 2017.





## Gurukul School, Avalahalli :

Save Water - Save Bengaluru Awareness Campaign was held on 6th April 2017 at Gurukul School, Avalahalli, J.P. Nagar 9th Phase, Anjanapura, Bengaluru.



Sri M.A. Chellaiah, Public Relation Officer, Sri Sanjeev Joseph, Principal, Sri Pradeep Kuchangi Asst. Executive Engineer, BWSSB, S-2 Sub-Division, Sri Anne Gowda, Scout Master Smt. Anjana, Guide Captain, Teachers and 75 Scouts-Guides were present.



An Awareness Route March was Flaged off from the School premises. Scouts-Guides, Teachers and the Guests were participated in the Route March. The Route March passed through the near by Locality. The Campaign was started from 6th to 8th April 2017 The Scouts-Guides visited many houses.

## B.B.M.P. Junior College, Chamarajpet :

The Bengaluru South District Organised an Awareness Campaign on 18th April 2017 at B.B.M.P. Junior College, Chamarajpet, nearly 600 Scouts-Guides and the Unit Leaders were attended the Campain. The Scout-Guides were visited may houses in the area and interacted with the people and motivated them about "Save Water - Save Bengaluru" Campaign. The Scouts-Guides from Chamarajpet, Basavanagudi, Anekal, Jayanagar, K.R. Puram, Ulsoor,Vijayanagar, White Field and Hombegowda Nagar participated in the campaign, They undertake the campaign from 19th to 21th April 2017 and the Scouts-Guides also visited many houses of the above said locality.



Sri P.G.R. Sindhia, State Chief Commissioner, The Bharat Scouts-Guides, Karnataka, presided over the Programme and motivated the Scouts-Guides to actively participate in the "Save water - Save Bengaluru" Campaign in the best interest of the Public Services.

Sri Gopala Gowda, Additional Chief Engineer BWSSB spoke about the water avalilability and requested the Scouts-Guides to inform the Public about the message of Save Water



d[illegible]ing their vist to house and thanked The Bharat Scouts-Guides, Karnataka involving in Association with the BWSSB in "Save Water - Save Bengaluru" Campaign.

Sri Desai, Asst. Executive Engineer. BWSSB, SW-I Sub-Division, Sri Raju, Principal, BBMP Junior College, Sri Kalleswarappa, Head Master, BBMP, High School, Sri Hemanth, Asst. Engineer, BWSSB, Chamarajpet, Sri M.S. Satheesh, Dist. Secretary Sri Narayanaswamy, Dist. Training Commissioner(Scouts) were presents Sri Nagaraj, Former Rover Scouts and Social Worker were present. Earlier Sri M.A. Chellaiah, Public Relations Officer, Welcomed the Guests, Invitees the Unit Leaders and the Scouts and Guides and briefed about the important of the programme.

Sri Siddagangaiah, Secretary, Local Association Vijayanagar proposed the vote of thanks.





Sri Raju, Principal Sri Kalleswarappa, Head Master provided all the support and Co-Operation for the successful conduct of the programme, at the BBMP Junior College. The officials from BWSSB, Chamarajpet extended all the support for the event.

### Halasuru Local Association : Rashtriya Military School

The Campaign was Flaged off by Major, Ompal, Principal, Rastriya Military School, Hosur Road, on 20th April 2017 at the Rashtriya Military School Campus, Sri G.J. Urankar, Vice-Principal, Sri A.M. Kharpare, NCC Officer, Sri B.D. Sharma, Sri Shivalingaiah, Scout Masters, Sri D. Magesh Kumar and 70 Scouts of the Rashtriya Military School were present.



Sri M.A. Chellaiah, Public Relations Officer addressed the participants. Smt. Victoria, Secretary Local Association Co-ordinated the Programme, The Scouts visited Neelasandra and Austin Town. Area and briefed about the messages on "Save Water - Save Bengaluru to the Public."

ಬುಧವಾರ • ಏಪ್ರಿಲ್ 19, 2017 ಪ್ರಜಾವಾಣಿ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ರಾಜ್ಯ ಆಯುಕ್ತ ಪಿ.ಜಿ.ಆರ್. ಸಿಂಧ್ಯ ಸಲಹೆ

# ಮಕ್ಕಳಿಂದ ಜಲಜಾಗೃತಿ ನಡೆಯಲಿ

ಪ್ರಜಾವಾಣಿ ವಾರ್ತೆ



ಪಿಜಿಆರ್ ಸಿಂಧ್ಯ ಅವರು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ವಿದ್ಯಾರ್ಥಿಗಳೊಂದಿಗೆ ಸಂವಾದ ನಡೆಸಿದರು. ಜಲಮಂಡಳಿ ಮುಖ್ಯ ಎಂಜಿನಿಯರ್ ಗೋಪಾಲ ಗೌಡ ಇದ್ದರು –ಪ್ರಜಾವಾಣಿ ಚಿತ್ರ

ಬೆಂಗಳೂರು: 'ನಗರದಲ್ಲಿ ಮುಂದಿನ ದಿನಗಳಲ್ಲಿ ನೀರಿನ ಸಮಸ್ಯೆ ಇನ್ನೂ ತೀಕ್ಷ್ಣವಾಗಲಿದೆ. ಈ ವಿಚಾರವನ್ನು ವಿದ್ಯಾರ್ಥಿಗಳು ಜನರಿಗೆ ತಲುಪಿಸಿ, ನೀರು ಸಂರಕ್ಷಿಸುವ ಬಗ್ಗೆ ಜಾಗೃತಿ ಮೂಡಿಸಬೇಕು' ಎಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ರಾಜ್ಯ ಆಯುಕ್ತ ಪಿ.ಜಿ.ಆರ್. ಸಿಂಧ್ಯ ಸಲಹೆ ನೀಡಿದರು.

ಜಲಮಂಡಳಿ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಹಾಗೂ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ (ಬಿಬಿಎಂಪಿ) ನಗರದಲ್ಲಿ ಹಮ್ಮಿಕೊಂಡಿದ್ದ 'ನೀರು ಉಳಿಸಿ–ಬೆಂಗಳೂರು ಉಳಿಸಿ' ಅಭಿಯಾನ ಉದ್ಘಾಟಿಸಿ ಅವರು ಮಾತನಾಡಿದರು.

'ನಗರದಲ್ಲಿ ಕೆಲವು ವರ್ಷಗಳ ಹಿಂದೆ 800 ಅಡಿ ಕೊರೆದರೆ ನೀರು ಸಿಗುತ್ತಿತ್ತು. ಈಗ 1200 ಅಡಿ ಕೊರೆದರೂ ನೀರು ದೊರಕದ ಸ್ಥಿತಿ ಇದೆ. ಅರ್ಧಕ್ಕರ್ಧ ನೀರನ್ನು ಪೋಲು ಮಾಡುತ್ತಿದ್ದೇವೆ. ಅದನ್ನು ಕಡಿಮೆಗೊಳಿಸಿದರೆ ನೀರಿನ ಸಮಸ್ಯೆ ಬಹಳಷ್ಟು ಕಡಿಮೆಯಾಗುತ್ತದೆ' ಎಂದರು.

'ಸ್ಕೌಟ್ಸ್ ಮತ್ತು ಗೈಡ್ಸ್ ವಿದ್ಯಾರ್ಥಿಗಳು ಮನೆ–ಮನೆಗಳಿಗೆ ಹೋಗಿ ನೀರಿನ ಸಂರಕ್ಷಣೆ ಕುರಿತು ಕರಪತ್ರಗಳನ್ನು ಹಂಚುತ್ತಾರೆ. ಅಲ್ಲದೆ ಭೇಟಿ ನೀಡುವ ಮನೆಗಳಿಂದ ಅಭಿಪ್ರಾಯ ಸಂಗ್ರಹಿಸಿ ಟಿಪ್ಪಣಿ ಮಾಡಿಕೊಳ್ಳುತ್ತಾರೆ' ಎಂದು ತಿಳಿಸಿದರು.

'ದೊಡ್ಡಬಳ್ಳಾಪುರದಲ್ಲಿ ನಡೆದ ರಾಜ್ಯ ಪುರಸ್ಕಾರ ಪೂರ್ವಭಾವಿ ಸಿದ್ಧತಾ ಕಾರ್ಯಾಗಾರದಲ್ಲಿ ಭಾಗವಹಿಸಿದ ಸ್ಕೌಟ್ಸ್ ಮತ್ತು ಗೈಡ್ಸ್ ವಿದ್ಯಾರ್ಥಿಗಳು ಇದರಲ್ಲಿ ಪಾಲ್ಗೊಳ್ಳುತ್ತಾರೆ. ಜಲಮಂಡಳಿ ಮತ್ತು ಬಿಬಿಎಂಪಿ ಸಹಯೋಗದಲ್ಲಿ ಮೇ 30 ರವರೆಗೆ ಈ ಅಭಿಯಾನ ನಡೆಯಲಿದೆ' ಎಂದರು.

**ಮುಖ್ಯಾಂಶಗಳು**

- **'ನೀರು ಉಳಿಸಿ–ಬೆಂಗಳೂರು ಉಳಿಸಿ' ಅಭಿಯಾನ ಉದ್ಘಾಟನೆ**
- **ನೀರಿನ ಜಾಗೃತಿಗೆ ಕರಪತ್ರ ವಿತರಣೆ**

ಜಲಮಂಡಳಿಯ ಹೆಚ್ಚುವರಿ ಮುಖ್ಯ ಎಂಜಿನಿಯರ್ ಗೋಪಾಲ ಗೌಡ, 'ಜೂನ್ 15ರವರೆಗೂ ನಗರಕ್ಕೆ ನೀರು ಪೂರೈಕೆಗೆ ಯಾವುದೇ ತೊಂದರೆ ಇಲ್ಲ. ಒಂದು ವೇಳೆ ಜೂನ್‌ನಲ್ಲಿ ಮಳೆಯಾಗದಿದ್ದರೆ ನೀರಿನ ಅಭಾವ ಉಂಟಾಗಲಿದೆ. ಜನರು ನೀರನ್ನು ಮಿತವಾಗಿ ಬಳಸಬೇಕು' ಎಂದು ಕೋರಿದರು.

ಈ ಅಭಿಯಾನದ ಸಂಚಾಲಕರಾದ ಚೆಲ್ಲಯ್ಯ, 'ಬಸವನಗುಡಿ, ಚಾಮರಾಜಪೇಟೆ, ಕೆ.ಆರ್. ಪುರ, ವಿಜಯನಗರ, ಜಯನಗರ, ವೈಟ್‌ಫೀಲ್ಡ್, ಹೊಂಬೇಗೌಡ ನಗರ, ಆನೇಕಲ್, ಹಲಸೂರು ಬಡಾವಣೆಗಳನ್ನು ಅಭಿಯಾನಕ್ಕಾಗಿ ಆಯ್ದುಕೊಳ್ಳಲಾಗಿದೆ. ಸುಮಾರು 1.5 ಲಕ್ಷ ಮನೆಗಳಿಗೆ ಭೇಟಿ ನೀಡುವ ಯೋಜನೆ ಇದೆ' ಎಂದು ಮಾಹಿತಿ ನೀಡಿದರು.

'ವಿಜಯನಗರ ಮತ್ತು ಚಾಮರಾಜಪೇಟೆಯಲ್ಲಿ ಜಾಗೃತಿ ಕಾರ್ಯಕ್ರಮ ಕೈಗೊಳ್ಳಲಾಗಿದೆ. ಬಹಳಷ್ಟು ಮನೆಗಳಲ್ಲಿ ಉತ್ತಮ ಪ್ರತಿಕ್ರಿಯೆ ಬಂದಿದೆ. ಈ ಅಭಿಯಾನದಿಂದ ಕನಿಷ್ಠ ಶೇ 10ರಷ್ಟು ನೀರು ಉಳಿತಾಯವಾದರೂ ಸಾರ್ಥಕ' ಎಂದು ಹೇಳಿದರು.

"When the well is dry, we know the worth of Water"

*- Benjamin Franklin (1746)*

**Team work is the Secret that make Common People *Achieve* Uncommon Results**

ಹೊಸ ದಿಗಂತ
ಬುಧವಾರ
19 ಏಪ್ರಿಲ್ 2017

ನೀರು ಉಳಿಸಿ ಜಾಗೃತಿಗಾಗಿ ಮನೆ–ಮನೆಗೂ ಬರಲಿದ್ದಾರೆ ಚೋಟಾ ಮಾಸ್ಟರ್ಸ್

# ಸ್ಕೌಟ್ಸ್, ಗೈಡ್ಸ್ ಮಕ್ಕಳಿಂದ ನೀರಿನ ಪಾಠ

ದಿಗಂತ ವರದಿ: ಬೆಂಗಳೂರು, ಏ.18

ದಿಗಂತ ಚಿತ್ರ



ಮಂಗಳವಾರ ನಡೆದ ನೀರು ಉಳಿಸಿ, ಬೆಂಗಳೂರು ಉಳಿಸಿ ಅಭಿಯಾನದಲ್ಲಿ ಮಾಜಿ ಸಚಿವ ಪಿಜಿಆರ್ ಸಿಂಧ್ಯಾ, ಸ್ಕೌಟ್ಸ್ ಮತ್ತು ಗೈಡ್ಸ್ ವಿದ್ಯಾರ್ಥಿಗಳು ಭಾಗವಹಿಸಿದ್ದರು.

ನಿಮ್ಮ ಮನೆಯಲ್ಲಿ ನೀರು ಮಿತವಾಗಿ ಬಳಸುತ್ತಿದ್ದಾರಾ ? ವಾಹನಗಳ ಸ್ವಚ್ಛತೆ ಮತ್ತು ಕೈ ತೋಟಗಳಿಗೆ ಯಾವ ನೀರನ್ನು ಬಳಸುತ್ತಿದ್ದಾರೆ ? ನೀರಿನ ಮರು ಬಳಕೆ ಹೇಗೆ ಮಾಡುತ್ತೀರಾ ? ಹೀಗೆಂದು ಪುಟ್ಟ ಮಕ್ಕಳು ನಿಮ್ಮ ಮನೆ ಬಾಗಿಲಿಗೆ ಬಂದು ಕೇಳಲಿದ್ದಾರೆ.

ಹೌದು... ಮನೆ ಬಾಗಿಲಿಗೆ ಸ್ಕೌಟ್ಸ್ ಮತ್ತು ಗೈಡ್ಸ್ ವಿದ್ಯಾರ್ಥಿಗಳು ಬಂದು ಹಿರಿಯರಿಗೆ ನೀರಿನ ಸಂರಕ್ಷಣೆ ಕುರಿತು ಜಾಗೃತಿ ಮೂಡಿಸುವ ಕೆಲಸವನ್ನು ಮಾಡಲಿದ್ದಾರೆ.

ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್, ಬೆಂಗಳೂರು ನೀರು ಸರಬರಾಜು ಹಾಗೂ ಒಳಚರಂಡಿ ಮಂಡಳಿ(ಬಿಡಬ್ಲ್ಯುಎಸ್ ಎಸ್‌ಬಿ) ಹಾಗೂ ಬಿಬಿಎಂಪಿ ಸಹಯೋಗದಲ್ಲಿ ಹಮ್ಮಿಕೊಳ್ಳಲಾಗಿರುವ ನೀರು ಉಳಿಸಿ, ಬೆಂಗಳೂರು ಉಳಿಸಿ ಅಭಿಯಾನದಲ್ಲಿ ಭಾಗವಹಿಸುತ್ತಿರುವ ಸ್ಕೌಟ್ಸ್ ಮತ್ತು ಗೈಡ್ಸ್ ವಿದ್ಯಾರ್ಥಿಗಳು ನಗರದಲ್ಲಿರುವ ಪ್ರತಿ ಮನೆಗಳಿಗೆ ತೆರಳಿ ನೀರು ಉಳಿಸುವುದರ ಕುರಿತು ಜಾಗೃತಿ ಮೂಡಿಸಲಿದ್ದಾರೆ. ಬೆಂಗಳೂರು ದಕ್ಷಿಣ ಹಾಗೂ ಬೆಂಗಳೂರು ಉತ್ತರ ಈ ಎರಡು ವಿಭಾಗದಲ್ಲಿಯೂ ಮೇ ತಿಂಗಳವರೆಗೆ ಈ ಅಭಿಯಾನ ನಡೆಯಲಿದೆ. ಒಟ್ಟಾರೆ ಒಂದುವರೆ ಲಕ್ಷ ಜನಕ್ಕೆ ನೀರಿನ ಮಿತ ಬಳಕೆ ಕುರಿತು ಅರಿವು ಮೂಡಿಸುವ ಉದ್ದೇಶ ಕರ್ನಾಟಕ ವಿಭಾಗದ ಸ್ಕೌಟ್ಸ್ ಮತ್ತು ಗೈಡ್ಸ್‌ಗಿದೆ.

**ಕರಪತ್ರ, ಭಿತ್ತಿಪತ್ರದ ಮೂಲಕ ಜಾಗೃತಿ:** ಮುಂದಿನ ಮೂರ್ನಾಲ್ಕು ದಿನಗಳಲ್ಲಿ 30–40 ಸಾವಿರ ಮನೆಗಳಿಗೆ ಈ ಮಕ್ಕಳು ಭೇಟಿ ನೀಡಲಿದ್ದಾರೆ. ಜಯನಗರ, ಬಸವನಗುಡಿ, ಚಾಮರಾಜಪೇಟೆ, ಕೆ.ಆರ್ ಪುರ, ವೈಟ್‌ಫೀಲ್ಡ್, ವಿಲ್ಸನ್ ಗಾರ್ಡನ್ ಸೇರಿದಂತೆ ಹಲವು ಸ್ಥಳಗಳಿಗೆ ಭೇಟಿ ನೀಡಿ ಅಭಿಯಾನ ನಡೆಸಲಿದ್ದಾರೆ. ಹಣ್ಣು–ತರಕಾರಿ ತೊಳೆದ ನೀರನ್ನು ಗಿಡಗಳಿಗೆ ಹಾಕುತ್ತೇನೆ, ಮಳೆ ನೀರು ಕೊಯ್ಲು ಅಳವಡಿಸಿಕೊಳ್ಳುತ್ತೇನೆ, ಕಾರು ತೊಳೆಯಲು ಬಕೆಟ್‌ನಲ್ಲಿ ನೀರು ಉಪಯೋಗಿಸುತ್ತೇನೆ, ಓವರ್ ಹೆಡ್ ಟ್ಯಾಂಕ್‌ಗೆ ಲೆವೆಲ್ ಕಂಟ್ರೋಲರ್ ಅಳವಡಿಸಿ ನೀರು ವ್ಯರ್ಥವಾಗುವುದನ್ನು ತಪ್ಪಿಸುತ್ತೇನೆ, ಅಗತ್ಯಕ್ಕೆ ತಕ್ಕಂತೆ ಫ್ಲಶ್‌ನ್ನು ಬಳಸುತ್ತೇನೆ, ಸೋರುವ ನಲ್ಲಿ ಮತ್ತು ಕೊಳವೆ ತಕ್ಷಣವೇ ಸರಿಪಡಿಸುತ್ತೇನೆ ಹೀಗೆ ವಿವಿಧ ವಾಕ್ಯಗಳಿರುವ ಕರಪತ್ರ ಮತ್ತು ಭಿತ್ತಿಪತ್ರ ನೀಡಿ ನೀರಿನ ಮಿತಬಳಕೆ ಕುರಿತು ಮನವರಿಕೆ ಮಾಡಿಕೊಡಲಾಗುವುದು.

**ಸೂಕ್ತ ಸಲಹೆಗಳ ಅಳವಡಿಕೆ:** ವಿದ್ಯಾರ್ಥಿಗಳು ಮನೆ ಭೇಟಿ ನೀಡಿ ಕೇವಲ ಕರಪತ್ರ ಹಂಚಿ ನೀರಿನ ಸಂರಕ್ಷಣೆ ಬಗ್ಗೆ ಜಾಗೃತಿ ಮೂಡಿಸಿದರಷ್ಟೇ ಅವರ ಕೆಲಸ ಮುಗಿಯುವುದಿಲ್ಲ, ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ಹಾಗೂ ಬಿಬಿಎಂಪಿ ಮನೆ ಸದಸ್ಯರು ನೀಡುವ ಸಲಹೆಗಳನ್ನು ಟಿಪ್ಪಣಿ ಮಾಡಿಕೊಂಡು ಅವರಿಂದ ಸಹಿ ಪಡೆಯಬೇಕು. ಜನರು ನೀಡಿದ ಸಲಹೆಗಳನ್ನು ಕರ್ನಾಟಕ ವಿಭಾಗದ ಸ್ಕೌಟ್ಸ್ ಮತ್ತು ಗೈಡ್ಸ್ ಬಿಡಬ್ಲ್ಯುಎಸ್‌ಎಸ್‌ಬಿಗೆ ನೀಡಲಿದೆ. ಅವುಗಳಲ್ಲಿ ಸೂಕ್ತವಾದನ್ನು ಬಿಡಬ್ಲ್ಯುಎಸ್‌ಎಸ್‌ಬಿ ಅಳವಡಿಸಿಕೊಳ್ಳಲಿದೆ.

**ನೀರಿನ ಮಿತ ಬಳಕೆ ಬಗ್ಗೆ ನಾಗರಿಕರಿಗೆ ತಿಳುವಳಿಕೆ**

ದೊಡ್ಡಬಳ್ಳಾಪುರದಲ್ಲಿ ನಡೆದ ರಾಜ್ಯ ಪುರಸ್ಕಾರ ಪೂರ್ವಭಾವಿ ಸಿದ್ಧತಾ ಕಾರ್ಯಾಗಾರದಲ್ಲಿ ಭಾಗವಹಿಸಿದ್ದ ಸ್ಕೌಟ್ಸ್ ಗೈಡ್ಸ್ ವಿದ್ಯಾರ್ಥಿಗಳು ಮತ್ತು ಶಿಕ್ಷಕರು ಮಂಗಳವಾರ ಪ್ರತಿದಿನ 10 ಮನೆಗಳಿಗೆ ಭೇಟಿ ನೀಡಿ ನೀರಿನ ಮರುಬಳಕೆ, ಮಿತ ಬಳಕೆ ಕುರಿತು ಜನರಿಗೆ ತಿಳುವಳಿಕೆ ನೀಡಿದರು.

**ಅಂತರ್ಜಲ ಮಟ್ಟ ಕುಸಿತ**

"ಬಿಡಬ್ಲ್ಯುಎಸ್‌ಎಸ್‌ಬಿ 1300 ದಶಲಕ್ಷ ಲೀಟರ್ ನೀರನ್ನು ಬೆಂಗಳೂರಿನ ಜನತೆಗೆ ಪ್ರತಿನಿತ್ಯ ಒದಗಿಸಲಿದೆ. ಜೂ.15ರವರೆಗೆ ತೊಂದರೆ ಇಲ್ಲ. ಜೂನ್ ವೇಳೆಗೆ ಮಳೆಯಾಗದಿದ್ದರೆ ಭಾರಿ ಸಮಸ್ಯೆಯನ್ನು ನಗರದ ಜನತೆ ಎದುರಿಸಬೇಕಾಗುತ್ತದೆ. ನಗರದಲ್ಲಿರುವ ಬೋರ್‌ವೆಲ್‌ಗಳು ಒಣಗುತ್ತಿವೆ. ಅಂತರ್ಜಾಲದ ಮಟ್ಟದ ಕುಸಿಯುತ್ತಿದೆ.

■ ಗೋಪಾಲಗೌಡ, ಬಿಡಬ್ಲ್ಯುಎಸ್‌ಎಸ್‌ಬಿ ಹೆಚ್ಚುವರಿ ಮುಖ್ಯ ಅಭಿಯಂತರ

**ಶೌಚಾಲಯಕ್ಕೆ ಹೆಚ್ಚು ಬಳಕೆ**

"ಶೇ.25ರಷ್ಟು ನೀರನ್ನು ಶೌಚಾಲಯಕ್ಕೆ ಬಳಸಲಾಗುವುದು. ಇನ್ನು ಉಳಿದ ಶೇ.25ರಷ್ಟು ನೀರನ್ನು ವಾಹನಗಳನ್ನು ತೊಳೆಯಲು ಬಳಸಲಾಗುವುದು. ಬೆಂಗಳೂರಿನ ಮಂದಿ ತಾವು ಅನಗತ್ಯವಾಗಿ ಖರ್ಚು ಮಾಡುವ ನೀರಿನಲ್ಲಿ ಅರ್ಧದಷ್ಟು ನೀರನ್ನು ಬಳಸಿದರೆ ಬಿಡಬ್ಲ್ಯುಎಸ್‌ಎಸ್‌ಬಿಗೆ 500 ಕೋಟಿ ರೂ.ಗಳಷ್ಟು ವಿದ್ಯುತ್ ಉಳಿತಾಯವಾಗಲಿದೆ. ಇಂದು ಬೆಂಗಳೂರಿನಲ್ಲಿ ಸಾವಿರ ಅಡಿಗಳಷ್ಟು ಕೊರೆದರೂ ನೀರು ಸಿಗದ ಪರಿಸ್ಥಿತಿ ಉಂಟಾಗಿದೆ.

■ ಪಿ.ಜಿ.ಆರ್ ಸಿಂಧ್ಯ, ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್‌ನ ರಾಜ್ಯ ಮುಖ್ಯ ಆಯುಕ್ತ

# ರಾಜ್ಯ ಮಟ್ಟದ ಕಡಲತೀರ ಚಾರಣ ಶಿಬಿರ

## ಕಾರವಾರ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ, ಜಿಲ್ಲಾ ಸಂಸ್ಥೆ ಕಾರವಾರ, ಉತ್ತರಕನ್ನಡ ಹಾಗೂ ಕಾರವಾರ ಸ್ಥಳೀಯ ಸಂಸ್ಥೆ, ವಿ ಪಿ ದೀನದಯಾಳು ನಾಯ್ಡುರವರ ಜನ್ಮಶತಮಾನೋತ್ಸವದ ಅಂಗವಾಗಿ ರೋವರ್ಸ್ ಮತ್ತು ರೇಂಜರ್ಸ್‌ಗಳ ಕಡಲತೀರ ಪ್ರಕೃತಿ ಅಧ್ಯಯನ ಹಾಗೂ ಚಾರಣ ಶಿಬಿರವನ್ನು ಕಾರವಾರದಲ್ಲಿ ಏಪ್ರಿಲ್ 14 ರಿಂದ 18ರ ವರೆಗೆ ಹಮ್ಮಿಕೊಳ್ಳಲಾಯಿತು,

ಈ ಶಿಬಿರಕ್ಕೆ ಶ್ರೀ ಪ್ರತೀಮ್ ಕುಮಾರ್ ಮಂಗಳೂರು, ಶ್ರೀ ಅಶೋಕ್ ಕುಮಾರ್ ಚಾಮರಾಜನಗರ, ಶ್ರೀ ಗಿರೀಶ್ ಹಾಸನ, ಶ್ರೀ ಸಾತ್ಪುತೆ, ಗೋಕಾಕ್ ಇವರುಗಳನ್ನು ರಾಜ್ಯಸಂಸ್ಥೆ ವತಿಯಿಂದ ರೋವರ್ಸ್ ವಿಭಾಗಕ್ಕೂ, ಶ್ರೀಮತಿ ಬಿ.ವಿ. ರಾಮಲತಾ ಬೆಂಗಳೂರು ಉತ್ತರ, ಶ್ರೀಮತಿ ಕಾಂಚನಮಾಲ ಹಾಸನ, ಕು. ದಿವ್ಯಶ್ರೀ ಜಿ ದಕ್ಷಿಣಕನ್ನಡ, ಕು. ದೀಪಿಕಾ ಎಸ್ ದಕ್ಷಿಣಕನ್ನಡ, ಶೋಭ ವರ್ಣೇಕರ್ ಕಾರವಾರ, ಸುಮಯ್ಯ ಸಯ್ಯದ್ ಕಾರವಾರ ಇವರುಗಳನ್ನು ರೇಂಜರ್ ವಿಭಾಗಕ್ಕೂ ನೇಮಿಸಲಾಗಿತ್ತು. ಶ್ರೀ ಬಿ.ಡಿ ಫರ್ನಾಂಡಿಸ್, ಜಿಲ್ಲಾ ಕಾರ್ಯದರ್ಶಿ, ಶ್ರೀ ನಾಗೇಶ್ ಶಿವಪುರ, ಎ.ಎಸ್.ಓ.ಸಿ(ಎಸ್), ಶ್ರೀ ಗಣೇಶ್ ಎನ್. ಬಿಸ್ತಣ್ಣನವರ್, ಕಾರ್ಯದರ್ಶಿ, ಶ್ರೀ ಆರ್.ಕೆ. ದುರ್ಗಾಕರ್, ಶ್ರೀ ಬಿ.ಟಿ. ಓಬ್ಲೇಶ್, ಶ್ರೀ ಮಂಜೂರ್ ಮುಲ್ಲಾ, ಡಾ. ಶಿವಾನಂದ ಭಟ್, ಶ್ರೀಮತಿ ಶೋಭಾ ವರ್ಣಾಕಾರ್, ಶ್ರೀಮತಿ ಶೋಭಾ ದೇಸಾಯಿ, ಶ್ರೀ ವಿ.ಆರ್. ಡೋಲೆ ಮಹದೇವ ರಾಣೆ, ಶ್ರೀ ಸುಮಯ್ ಸೈಯದ್ ಮುಂತಾದವರು ಶಿಬಿರದ ಸಹಾಯಕರಾಗಿ ಕಾರ್ಯನಿರ್ವಹಿಸಿದರು. 47 ರೇಂಜರ್ಸ್ ಹಾಗೂ 128 ರೋವರ್ಸ್‌ಗಳು ಶಿಬಿರದಲ್ಲಿ ಭಾಗವಹಿಸಿದ್ದರು.



ಏಪ್ರಿಲ್ 14, 2017 ರಂದು ಶಿಬಿರದ ಉದ್ಘಾಟನಾ ಸಮಾರಂಭವನ್ನು ಕಾರವಾರದ ರಂಗಮಂದಿರದಲ್ಲಿ ನೆರವೇರಿಸಲಾಯಿತು. ಶಿಬಿರವನ್ನು ಮಾನ್ಯ ಶ್ರೀ ನಕುಲ್, ಜಿಲ್ಲಾಧಿಕಾರಿಗಳು ಉತ್ತರಕನ್ನಡ ಜಿಲ್ಲೆ ಇವರು ಉದ್ಘಾಟಿಸಿದರು. ಶ್ರೀ ಪಿ ಜಿ ಆರ್ ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ, ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿಕೊಂಡಿದ್ದರು. ವೇದಿಕೆಯಲ್ಲಿ ಶ್ರೀ ಚಂದ್ರಶೇಖರ್ ನಾಯಕ್ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್ ಉತ್ತರಕನ್ನಡ, ಶ್ರೀ ಪಿ ಕೆ ಪ್ರಕಾಶ್, ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಉತ್ತರಕನ್ನಡ, ಪ್ರಭಾಕರ್ ಭಟ್ ರಾಜ್ಯ ಸಂಘಟನಾ ಆಯುಕ್ತರು ಉಪಸ್ಥಿತರಿದ್ದರು.



ಚಹಾವಿರಾಮದ ಬಳಿಕ ಅಲ್ಲಿಂದ ಕಾಲ್ನಡಿಗೆಯಲ್ಲಿ ಸಮುದ್ರ ತೀರಕ್ಕೆ ಬಂದಂತಹ ಶಿಬಿರಾರ್ಥಿಗಳು ಪ್ರಕೃತಿ ಸೌಂದರ್ಯವನ್ನು ಸವಿದರು. ಅಲ್ಲಿನ ಫುಡ್ ಕೋರ್ಟ್ ನ ವೇದಿಕೆಯಲ್ಲಿ ಸ್ಥಳೀಯ ಸಂಸ್ಥೆ ಕಾರವಾರದ ವತಿಯಿಂದ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಆಯೋಜಿಸಲಾಗಿತ್ತು.

ಕಡಲತೀರ ಚಾರಣದ ಎರಡನೇ ದಿನವಾದ ಏಪ್ರಿಲ್ 15 ರಂದು ಬೆಳಗ್ಗೆ ತಿಳಿಮೇತಿವರೆಗೆ ಕರ್ನಾಟಕ ಸಾರಿಗೆ ಬಸ್ಸಿನಲ್ಲಿ ತೆರಳಿ, ತಿಳಿಮೇತಿಯಲ್ಲಿ ಶ್ರೀ ಪ್ರಭಾಕರ್ ಭಟ್ ರಾಜ್ಯ ಸಂಘಟನಾ ಆಯುಕ್ತರು ಹಸಿರು ನಿಶಾನೆ ತೋರುವುದರೊಂದಿಗೆ ಆ ದಿನದ ಚಾರಣ ಆರಂಭಗೊಂಡಿತು. ಶ್ರೀ ಸಂಜಯ್ ಸೋಲಂಕಿ ತಾಲೂಕು ಆಯುಕ್ತರು ಭಾರತ್ ಸ್ಕೌಟ್- ಗೈಡ್ ಕಡಲತೀರದ ಚಾರಣವನ್ನು ಉದ್ಘಾಟಿಸಿ ಶುಭ ಹಾರೈಸಿದರು. ಚಾರಣದ ಸಂದರ್ಭ ಶಿಬಿರಾರ್ಥಿಗಳು ಮೀನುಗಾರರ ಜೀವನಶೈಲಿ, ಮೀನು ಹಿಡಿಯುವ



ವಿಧಾನ, ಬಲೆ ಹೆಣೆಯುವ ಬಗೆ ಹಾಗೂ ವಿವಿಧ ರೀತಿಯ ಮೀನುಗಳ ಬಗ್ಗೆ ತಿಳಿದುಕೊಂಡರು. ಚಾರಣವು ಮುಂದುವರಿದು ದೇವಭಾಗ್, ಕಾಳಿಸಂಗಮ, ತರಂಗ್, ಚಿತ್ತಕತ್ತಲ್ ಮೂಲಕ ಸಾಗಿ ಸರಿಸುಮಾರು 20 ಕಿ.ಮಿ ನಂತರ ಸದಾಶಿವಗಢದಲ್ಲಿರುವ ಶಿವಾಜಿ ಕಟ್ಟಿಸಿದ ಶ್ರೀ ದುರ್ಗಾದೇವಿ ಮಂದಿರವನ್ನು ತಲುಪಿ, ದೇವಿ ದರ್ಶನವನ್ನು ಮಾಡಲಾಯಿತು. ನಂತರ ಚಾರಣವನ್ನು ಮುಂದುವರಿಸಿ ದಾರಿಯಲ್ಲಿ ಇದ್ದ ದರ್ಗಾವೊಂದಕ್ಕೆ ಭೇಡಿ ನೀಡಿ, ಸುಮಾರು 1 ಕಿ ಮಿ ಉದ್ದವಿರುವ ಕಾಳಿ ನದಿಯ ಸೇತುವೆಯ ಮೂಲಕ ಜಿಲ್ಲಾ ವಿಜ್ಞಾನ ಕೇಂದ್ರಕ್ಕೆ ಭೇಟಿ ನೀಡಲಾಯಿತು. ಅಲ್ಲಿನ ಮೇಲ್ವಿಚಾರಕರಾದ ಡಾ॥ ವಿ. ಎನ್ ನಾಯಕ್, ಹರೀಶ್ ಕುಮಾರ್ ಹಾಗೂ ಅಲ್ಲಿನ ಸಿಬ್ಬಂದಿಗಳು ಪರಿಸರದ ಬಗ್ಗೆ ಉಪಯುಕ್ತ ಮಾಹಿತಿಗಳನ್ನು ನೀಡಿ ಶಿಬಿರಕ್ಕೆ ಶುಭ ಹಾರೈಸಿದರು. ಅಲ್ಲಿಂದ ಶಿವಾಜಿ ಪ್ರೌಢಶಾಲೆ, ಬಾಡದಲ್ಲಿ ನಡೆದ ಶಿಬಿರಾಗ್ನಿ ಕಾರ್ಯಕ್ರಮದಲ್ಲಿ ಶಿಬಿರಾರ್ಥಿಗಳು ಭಾಗವಹಿಸಿದರು. ಕಾರ್ಯಕ್ರಮವನ್ನು ಸಂಜಯ್ ಸೋಲಂಕಿ ವಕೀಲರು ಹಾಗೂ ತಾಲೂಕು ಆಯುಕ್ತರು ಭಾರತ್ ಸ್ಕೌಟ್– ಗೈಡ್, ಉಧ್ಘಾಟಿಸಿದರು.

ಶಿಬಿರದ ಮೂರನೆಯ ದಿನ ಏಪ್ರಿಲ್ 16 ರಂದು ಸರಕಾರಿ ಬಸ್ಸಿನಲ್ಲಿ ಯಾಣಕ್ಕೆ ಪ್ರಯಾಣಿಸಿ, ಸುಮಾರು 1.30 ಕ್ಕೆ ಯಾಣಕ್ಕೆ ತಲುಪಿ ಅಲ್ಲಿಂದ ಚಾರಣವು ಶ್ರೀ ವಸಂತ್ ಕುಮಾರ್ ಗೌಡ ಉಪವಲಯ ಅರಣ್ಯಧಿಕಾರಿ, ತೋರಿದ ಹಸಿರು ನಿಶಾನೆಯ ಮೂಲಕ ಆರಂಭಗೊಂಡಿತು. ಯಾಣದ ದೇವಸ್ಥಾನವನ್ನು ತಲುಪಿದ ನಂತರ ಶ್ರೀ ವಿ. ಎನ್. ನಾಯಕ್, ಮಾಜಿ ಕಾರ್ಯದರ್ಶಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಉತ್ತರಕನ್ನಡ ಅಲ್ಲಿನ ಪರಿಸರದ ಬಗ್ಗೆ, ಸ್ಥಳ ಮಹಿಮೆಯ ಬಗ್ಗೆ ಮಾಹಿತಿ ನೀಡಿ ಶಿಬಿರಾರ್ಥಿಗಳಿಗೆ ಮಾಹಿತಿ ನೀಡಿ ಅಲ್ಲಿನ ಸಸ್ಯ ಸಂಕುಲದ, ಪ್ರಾಣಿಗಳ ಬಗ್ಗೆ ವಿವರಿಸಿದರು.

ಶಿಬಿರದ ನಾಲ್ಕನೇ ದಿನವಾದ ಏಪ್ರಿಲ್ 17 ರಂದು ಕಾರವಾರ ಬಸ್ ನಿಲ್ದಾಣ, ಸುಭಾಷ್ ಸರ್ಕಲ್ ಬಳಿ ಇರುವ ಗಣಪತಿ ದೇವಸ್ಥಾನ, ಜಿಲ್ಲಾಧಿಕಾರಿಗಳ ಕಛೇರಿ ಹಾಗೂ ನಗರದ ಮಾರುಕಟ್ಟೆ ಪ್ರದೇಶದ ಶುಚಿತ್ವ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಯಿತು. ಮಾನ್ಯ ಮೋಹನ್ ರಾಜ್, ಪ್ರಭಾರ ಆಯುಕ್ತರು ನಗರಸಭೆ ಶಿಬಿರಾರ್ಥಿಗಳನ್ನು ಉದ್ದೇಶಿಸಿ, ಪ್ರೋತ್ಸಾಹದ ಮಾತುಗಳನ್ನಾಡಿದರು.

ಜಿಲ್ಲಾಧಿಕಾರಿಗಳ ಕಛೇರಿಯಿಂದ ಶಿಬಿರಾರ್ಥಿಗಳು ಕೈಗಾ ದ ವಾಹನಗಳಲ್ಲಿ ಕೈಗಾದೆಡೆಗೆ ಪ್ರಯಾಣ ಬೆಳಿಸಿದರು. ದಾರಿಯುದ್ದಕ್ಕೂ ದಟ್ಟವಾದ ಕಾಡು, ಕಾಳಿ ನದಿಗೆ ಕಟ್ಟಲಾದ ಕುದ್ರಾಅಣೆಕಟ್ಟು, ವಿದ್ಯುದಾಗರಗಳನ್ನು ವೀಕ್ಷಿಸಿದರು.

ತದ ನಂತರ ಶ್ರೀ ಅನ್ಸಾರಿ ವಿದ್ಯುತ್‌ನ ಉತ್ಪಾದನೆ, ಅದಕ್ಕಾಗಿ ವಿವಿಧ ಹಂತಗಳಲ್ಲಿ ಪಡುವ ಪರಿಶ್ರಮವನ್ನು ವಿವರಿಸಿದರು. ಶ್ರೀ ವೀರೇಂದ್ರ ತಾರಣ್ಣವರ್ ಅಣುಶಕ್ತಿ ಕೇಂದ್ರದಲ್ಲಿ ವಿದ್ಯುತ್ ಉತ್ಪಾದನಾ ತಂತ್ರಜ್ಞಾನಗಳ ಬಗ್ಗೆ, ವಿಧಾನದ ಬಗ್ಗೆ ಸವಿವರವಾಗಿ ವಿವರಿಸಿದರು, ಹಾಗೂ ಅನುಮಾನಗಳನ್ನು ಪರಿಹರಿಸಿದರು.

ಅಲ್ಲಿಂದ ವಸತಿ ನಿಲಯಕ್ಕೆ ಹಿಂತಿರುಗಿದ ಶಿಬಿರಾರ್ಥಿಗಳು ರಾತ್ರಿಯ ಭವ್ಯ ಶಿಬಿರಾಗ್ನಿಯ ತಯಾರಿಯಲ್ಲಿ ತೊಡಗಿದರು. ಶ್ರೀ ಪಿ ಕೆ ಪ್ರಕಾಶ್ ಶಿಬಿರಾಗ್ನಿಯನ್ನು ಉದ್ಘಾಟಿಸಿದರು. ಹಾಗೂ ಡಾ॥ ಸುಚೇತಾ, ಶ್ರೀ ರಾಮಕೃಷ್ಣ ನಾಯಕ್ ಭವ್ಯ ಶಿಬಿರಾಗ್ನಿ ಕಾರ್ಯಕ್ರಮದಲ್ಲಿ ಭಾಗವಹಿಸಿದರು.

ಶಿಬಿರದ ಕೊನೆಯ ದಿನವಾದ ಏಪ್ರಿಲ್ 18ರಂದು ಪ್ರಾರ್ಥನೆಯಲ್ಲಿ ಭಾಗವಹಿಸಿದರು. ಬಳಿಕ ಸಮುದ್ರ ತೀರಕ್ಕೆ ತೆರಳಿದರು. ಸಮುದ್ರ ತೀರಕ್ಕೆ ಆಗಮಿಸಿದ ವಿಶೇಷ ಜಿಲ್ಲಾಧಿಕಾರಿ ಶ್ರೀ ಸದಾಶಿವ ಪ್ರಭು ಮಾತನಾಡಿ ಶಿಬಿರಾರ್ಥಿಗಳ ಕಾರ್ಯವನ್ನು ಪ್ರಶಂಸಿದರು. ಶ್ರೀ ಪಿ ಕೆ ಪ್ರಕಾಶ್, ಶ್ರೀ ಶಿವಾನಂದ ಕರಾಳೆ, ಅಸಿಸ್ಟೆಂಟ್ ಕಮಿಷನರ್, ಶ್ರೀ ರಾಮಕೃಷ್ಣ ನಾಯಕ್, ಶಿಕ್ಷಣಾಧಿಕಾರಿ, ಶ್ರೀ ಶ್ರೀಕಾಂತ್ ಹೆಗಡೆ, ಶ್ರೀ ಮೋಹನ್ ರಾಜ್, ನಗರಸಭೆ ಆಯುಕ್ತರು ಸ್ಥಳದಲ್ಲಿ ಉಪಸ್ಥಿತರಿದ್ದು ಸ್ವಚ್ಚತಾ ಕಾರ್ಯಕ್ರಮಕ್ಕೆ ಚಾಲನೆ ನೀಡಲಾಯಿತು.

ಅಲ್ಲಿಂದ ಶಿಬಿರಾರ್ಥಿಗಳು ಶಿವಾಜಿ ಪ್ರೌಢ ಶಾಲೆಯ ಮೈದಾನದಲ್ಲಿ ಧ್ವಜಾರೋಹಣವನ್ನು ಮಾಡಿ ಸಮಾರೋಪ ಸಮಾರಂಭಕ್ಕೆ ಸೇರಿದರು. ಕಾರ್ಯಕ್ರಮದಲ್ಲಿ ಶ್ರೀ ರಾಮಕೃಷ್ಣ ನಾಯಕ್, ಶ್ರೀ ಪಿ ಕೆ ಪ್ರಕಾಶ್, ಶ್ರೀ ಕೃಷ್ಣಮೂರ್ತಿ ಭಟ್, ಶ್ರೀ ಸಂಜಯ್ ಸೋಲಂಕಿ ಡಾ. ತಬಸ್ಸುಂ ಮಕಾದಂ ಉಪಸ್ಥಿತರಿದ್ದರು.

ಶಿಬಿರವು ರಾಜ್ಯ ಸಂಘಟನಾ ಆಯುಕ್ತರು ಆದ ಶ್ರೀ ಪ್ರಭಾಕರ್ ಭಟ್ ಇವರ ಮುಂದಾಳತ್ವದಲ್ಲಿ ಯಶಸ್ವಿಯಾಗಿ ಸಮಾಪ್ತಿಯಾಯಿತು.




# 17ನೇ ರಾಷ್ಟ್ರೀಯ ಜಾಂಬೂರಿಯ ಸವಿನೆನಪುಗಳು

ಶ್ರೀಮತಿ ಎಸ್.ಕೆ. ಪ್ರಭಾ, ಎಲ್.ಟಿ. (ಗೈಡ್ಸ್)
ರಾಜ್ಯ ಜಂಟಿ ಕಾರ್ಯದರ್ಶಿ

ಹಿಂದಿನ ಸಂಚಿಕೆಯಿಂದ...

## ಜಾಂಬೂರಿಯಲ್ಲಿ ಚಟುವಟಿಕೆಗಳ ಚಿತ್ತಾರ

**ಸಮಾವೇಶಗಳು:** ದಳನಾಯಕ/ನಾಯಕಿಯರಿಗೆ, ವೃಕ್ಷಮಣಿ ಪದಕಧಾರಕರಿಗೆ, ತರಬೇತುದಾರರಿಗೆ, ರಾಜ್ಯದ ಶಿಕ್ಷಣ ಇಲಾಖೆಯ ಉಪನಿರ್ದೇಶಕರು ಮತ್ತು ಅಧಿಕಾರಿಗಳಿಗೆ, ಸಭಾಂಗಣಗಳಲ್ಲಿ ಪ್ರತ್ಯೇಕವಾಗಿ ಸಮಾವೇಶಗಳನ್ನು ಆಯೋಜಿಸಲಾಗಿತ್ತು. ಇದರಲ್ಲಿ ಚಳಿವಳಿಯ ಬೆಳವಣಿಗೆ, ಸಮಸ್ಯೆ ಮತ್ತು ಸವಾಲುಗಳನ್ನು ಕುರಿತು ಚರ್ಚಿಸಲಾಯಿತು ಇವುಗಳಿಗೆ ಪರಿಹಾರ ಕಂಡುಕೊಳ್ಳುವ ಪ್ರಯತ್ನ ನಡೆಯಿತು. ಕೆಲವು ಠರಾವುಗಳನ್ನು ಮಾಡಲಾಯಿತು.

ಈ ಸಮಾವೇಶಗಳಲ್ಲಿ ಪ್ರಧಾನ ರಾಷ್ಟ್ರೀಯ ಆಯುಕ್ತರಾದ ಶ್ರೀ ಬಿ.ಐ. ನಗರಾಳೆ, ರಾಷ್ಟ್ರ ಸಂಸ್ಥೆ ನಿರ್ದೇಶಕರಾದ ಶ್ರೀ ಕೆ. ಸುಕುಮಾರ ಮತ್ತು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಮತ್ತು ಪದಾಧಿಕಾರಿಗಳು ಸಕ್ರಿಯವಾಗಿ ಭಾಗವಹಿಸಿದರು.

ಭಾರತ್ ಸ್ಕೌಟ್– ಗೈಡ್ ಫೆಲೋಷಿಪ್ ಸಮಾರಂಭ: ಸ್ಕೌಟ್ ಮತ್ತು ಗೈಡ್‌ಗಳ ದತ್ತಿಗೆ 10 ರಿಂದ 50 ಸಾವಿರ ದೇಣಿಗೆ ನೀಡಿದ ಸಂಸ್ಥೆಯ ಸದಸ್ಯರಿಗೆ ಮತ್ತು ಹಿತೈಷಿಗಳಿಗೆ ಪ್ರಶಸ್ತಿ ಪ್ರದಾನ ಮಾಡಲಾಯಿತು. ಶ್ರೀ ಅನಿಲ್ ಕುಮಾರ್ ಜೈನ್, ಅಧ್ಯಕ್ಷರು, ಶ್ರೀ ಬಿ.ಐ.ನಗರಾಳೆ, ಪ್ರಧಾನ ರಾಷ್ಟ್ರೀಯ ಆಯುಕ್ತರು, ಶ್ರೀ.ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು, ಶ್ರೀ ಕೆ.ಸುಕುಮಾರ್,ನಿರ್ದೇಶಕರು, ಶ್ರೀ ಕೊಂಡಜ್ಜಿ ಷಣ್ಮುಖಪ್ಪ, ರಾಜ್ಯದ ಉಪಾಧ್ಯಕ್ಷರು, ಶ್ರೀಮತಿ ಗೀತಾ ನಟರಾಜ್, ರಾಜ್ಯ ಗೈಡ್ ಆಯುಕ್ತರು ಹಾಗು ರಾಷ್ಟ್ರೀಯ ಉಪಾಧ್ಯಕ್ಷರು ಅವರು ಉಪಸ್ಥಿತರಿದ್ದು ಪ್ರಶಸ್ತಿ ಪ್ರದಾನ ಮಾಡಿ ಶುಭ ಕೋರಿದರು. ಅಂತರರಾಷ್ಟ್ರೀಯ ಯುವವೇದಿಕೆ, ಕೊರಿಯಾ: ಇವರು ಮೆದುಳಿನ ಸುಸ್ಥಿತಿಯನ್ನು ಕಾಪಾಡಿಕೊಳ್ಳುವ ಮೂಲಕ ಯುವಶಕ್ತಿಯನ್ನು ಅಭಿವೃದ್ಧಿಮಾಡುವ ವಿಧಾನದ ಅವರ ಒಂದು ಕಾರ್ಯಕ್ರಮವನ್ನು ಪರಿಚಯಿಸಿದರು.

**ಕಬ್ಬಿಂಗ್ ಶತಮಾನೋತ್ಸವ:** 6 ರಿಂದ 10 ವರ್ಷದ ಬಾಲಕರ ವಿಭಾಗವನ್ನು ಕಬ್ಬಿಂಗ್ ಎನ್ನುತ್ತೇವೆ. ಈ ಭಾಗ ತೆರೆದು 100 ವರ್ಷವಾಯಿತು. ದಿನಾಂಕ 28 ರಿಂದ 30.12.2016 ರವರೆಗೆ ಕರ್ನಾಟಕದ 500 ಕಬ್ ಮತ್ತು ಬುಲ್‌ಬುಲ್ ಹೆಣ್ಣು ಮಕ್ಕಳಿಗೆ ಜಾಂಬೂರಿ ನಗರದಲ್ಲಿ ಉತ್ಸವವನ್ನು ಆಯೋಜಿಸಲಾಗಿತ್ತು. ಶತಮಾನೋತ್ಸವಕ್ಕೆ ಮೈಸೂರು ರಾಜಮನೆತನದ ಯುವರಾಜರಾದ ಶ್ರೀಯದುವೀರ ಕೃಷ್ಣದತ್ತ ಚಾಮರಾಜ ಒಡೆಯರ್ ಮುಖ್ಯ ಅತಿಥಿಯಾಗಿ ಭಾಗವಹಿಸಿದ್ದರು. ಮಕ್ಕಳು ಉತ್ಸವದ ಸಂಭ್ರಮದ ಜೊತೆ ಜಾಂಬೂರಿಯ ಇತರ ಚಟುವಟಿಕೆಗಳಲ್ಲೂ ಭಾಗವಹಿಸಿ ಆನಂದಿಸಿದರು.




**ಮುಕ್ತದಳಗಳ ಸಮಾವೇಶ:** ಕರ್ನಾಟಕದ ಮುಕ್ತದಳಗಳ 500 ಸ್ಕೌಟ್ಸ್–ಗೈಡ್ಸ್‌ಗಳು ಜನವರಿ 01 ರಿಂದ ಜನವರಿ 03ರ ವರೆಗೆ ಸಮಾವೇಶದಲ್ಲಿ ಭಾಗವಹಿಸಿದ್ದರು. ಅವರದೇ ಆದ ಕಾರ್ಯಕ್ರಮಗಳ ಜೊತೆಗೆ ಜಾಂಬೂರಿ ಚಟುವಟಿಕೆಗಳಲ್ಲೂ ಪಾಲುಗೊಂಡರು.

**ಯೋಗ ದಿನ :** ಜನವರಿ 02 ರಂದು ಬೆಳಗ್ಗೆ 7.00 ಘಂಟೆಗೆ ಆಚರಿಸಲಾಯಿತು. ಪ್ರಾಂಗಣದಲ್ಲಿ ಎಲ್ಲಾ ರಾಜ್ಯದ ಒಟ್ಟಾರೆ 1500 ಪ್ರತಿನಿಧಿಗಳು ಉಪಸ್ಥಿತರಿದ್ದರು. ಉಳಿದ ಮಕ್ಕಳು ತಮ್ಮ ತಮ್ಮ ಉಪವಿಭಾಗದಲ್ಲಿ ಯೋಗವನ್ನು ಮಾಡಿದರು. ಸುಮಾರು 1 ಗಂಟೆ ಕಾಲ ಯೋಗ ಕಾರ್ಯಕ್ರಮವು ನಡೆಯಿತು. ಕೇಂದ್ರ ಧ್ವನಿವರ್ಧಕದ ಮೂಲಕ ಕಾರ್ಯಕ್ರಮವನ್ನು ನಿಯಂತ್ರಿಸಲಾಯಿತು. ಇದು ಒಂದು ಅಪರೂಪದ ಅಪೂರ್ವ ದೃಶ್ಯಾವಳಿಯಾಗಿತ್ತು.

ರಾಜ್ಯ ದಿನಾಚರಣೆ: ಬೇರೆ ಬೇರೆ ರಾಜ್ಯಗಳ ತಂಡಗಳನ್ನು ತಮ್ಮ ರಾಜ್ಯಕ್ಕೆ ಆಹ್ವಾನಿಸಿ, ಸಾಂಸ್ಕೃತಿಕ ಕಾರ್ಯಕ್ರಮ ಮತ್ತು ಭೋಜನ ಕೂಟವನ್ನು ಪ್ರತಿ ದಿನವೂ ಏರ್ಪಡಿಸಲಾಗುತ್ತಿತ್ತು. ಈ ಕಾರ್ಯಕ್ರಮ ಪರಸ್ಪರ ಸ್ನೇಹ ಸೌಹಾರ್ದತೆ ಮತ್ತು ಭಾವೈಕ್ಯತೆಯ ದ್ಯೋತಕವಾಗಿತ್ತು.

**ಆಹಾರ:** ಎಲ್ಲಾ ರಾಜ್ಯಗಳು ತಮ್ಮ ತಮ್ಮ ಅಡುಗೆ ಮನೆಯಲ್ಲಿ ಮಕ್ಕಳಿಗೆ ಒಳ್ಳೆಯ ಊಟೋಪಹಾರ ತಯಾರಿಸಿ ಬಡಿಸುತ್ತಿದ್ದರು. ಕರ್ನಾಟಕ ರಾಜ್ಯ ಒಂದು ಕೇಂದ್ರ ಪಾಕಶಾಲೆಯನ್ನು ತೆರೆದಿತ್ತು. ಇದರಲ್ಲಿ ಮಕ್ಕಳು ಮತ್ತು ಶಿಕ್ಷಕರನ್ನು ಹೊರತುಪಡಿಸಿ, ಜಾಂಬೂರಿಯ ಎಲ್ಲಾ ಸಿಬ್ಬಂದಿಗಳು ಸ್ವಯಂ ಸೇವಕರು, ಅತಿಥಿಗಳು, ಸಂದರ್ಶಕರು ಬಂದು ಹಗಲು ರಾತ್ರಿ ಎನ್ನದೆ ಆತಿಥ್ಯ ಸ್ವೀಕರಿಸುತ್ತಿದ್ದರು. ಇದಲ್ಲದೆ ಅನೇಕ ದಾನಿಗಳು ಸಮಸ್ತ ಮಕ್ಕಳಿಗೂ ಸಿಹಿ, ಹಾಲು, ತಿಂಡಿ ತಿನಿಸು, ಹಣ್ಣುಗಳನ್ನು ನೀಡಿದ್ದು ಒಂದು ವಿಶೇಷ. ಮಕ್ಕಳು ಅದರಿಂದ ತಣಿದದ್ದು ಮತ್ತು ಆನಂದಿಸಿದ್ದು ದಾನಿಗಳ ಶ್ರೇಯೋಭಿವೃದ್ಧಿಗೆ ಒಂದು ಹಾರೈಕೆಯಂತಿತ್ತು.

**ಆರೋಗ್ಯ:** 50 ಬೆಡ್ಡಿನ ಸುಸಜ್ಜಿತ ಹೈಟೆಕ್ ಮಟ್ಟದ ಆಸ್ಪತ್ರೆಯನ್ನು ಸ್ಥಾಪಿಸಲಾಗಿತ್ತು. ಜೊತೆಗೆ 24x7 ಸಮಯವು ಆಂಬ್ಯುಲೆನ್ಸ್ ಸದಾ ಸಿದ್ದವಾಗಿರುತಿತ್ತು, ವೈದ್ಯರು, ನರ್ಸ್‌ಗಳು ಮತ್ತು ನಮ್ಮ ಸ್ವಯಂ ಸೇವಕರ ಸೇವೆ ಶ್ಲಾಘನೀಯವಾಗಿತ್ತು. 7 ದಿನಕ್ಕೆ ಸುಮಾರು 2500 ಮಕ್ಕಳು ಚಿಕಿತ್ಸೆ ಪಡೆದಿದ್ದಾರೆಂದು ತಿಳಿದು ಬಂದಿದೆ. ಎಲ್ಲರೂ ಗುಣಮುಖರಾಗಿ ನಗುನಗುತ್ತಾ ತಮ್ಮ ಗೂಡಿಗೆ ಮರಳಿದರು. ಆರೋಗ್ಯದ ಜೊತೆ ನೈರ್ಮಲ್ಯದ ಬಗ್ಗೆಯೂ ಆದ್ಯ ಗಮನ ನೀಡಲಾಗಿತ್ತು.



**ಸಮಾರೋಪ ಸಮಾರಂಭ:** ಈ ಸಮಾರಂಭದಲ್ಲಿ ದುಃಖದ ಛಾಯೆ ಕವಿದಿತ್ತು. ಜನವರಿ 02 ರಂದು ನಡೆದ ಆಹಾರದ ಮಹಾಮೇಳದಲ್ಲಿ ಸಕ್ರಿಯವಾಗಿ ಭಾಗವಹಿಸಿದ ರಾಜ್ಯದ ಸಕ್ಕರೆ ಮತ್ತು ಸಹಕಾರ ಸಚಿವರಾದ ಶ್ರೀ ಎಚ್.ಎಸ್. ಮಹದೇವಪ್ರಸಾದ್ ಅವರು ಸಮಾರೋಪ ಸಂದರ್ಭದಲ್ಲಿ ಇಲ್ಲವಾಗಿದ್ದು ಎಲ್ಲರಿಗೂ ದುಃಖದ ಸಂಗತಿಯಾಗಿತ್ತು. ಸಮಾರೋಪದಲ್ಲಿ ಶ್ರೀ ವಿಶ್ವನಾಥ್, (Parliament Secretary) ಹಿಂದಿನ ರಾಷ್ಟ್ರೀಯ ಸಂಸ್ಥೆ ನಿರ್ದೇಶಕರಾಗಿದ್ದ ಶ್ರೀ ಜಿ. ರಂಗರಾವ್, ಶ್ರೀ ಕೆ.ಬಿ.ಸಿ ನಾಯರ್, ಹಿರಿಯ ನಾಯಕರಾದ ಶ್ರೀ ವಿ.ಆರ್. ಗಣಾತೆ, ಶ್ರೀ ಡಿ.ಕೆ. ಶಿವಕುಮಾರ್, ಗೌರವಾನ್ವಿತ ಇಂಧನ ಸಚಿವರು, ಶ್ರೀ ಯು.ಟಿ. ಖಾದರ್, ಗೌರವಾನ್ವಿತ ಆಹಾರ ಮತ್ತು ನಾಗರೀಕ ಸರಬರಾಜು ಸಚಿವರು ಮುಂತಾದ ಗಣ್ಯರು ಉಪಸ್ಥಿತರಿದ್ದರು.

ಶ್ರೀ ಬಿ.ಐ. ನಗರಾಳೆ, ಪ್ರದಾನ ರಾಷ್ಟ್ರೀಯ ಆಯುಕ್ತರು ಮತ್ತು ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು, ಕರ್ನಾಟಕ ಮುಂತಾದವರು ಎಲ್ಲಾ ರಾಜ್ಯಗಳ ಸ್ಕೌಟ್ ಮತ್ತು ಗೈಡ್ ತಂಡಗಳಿಂದ ಘನವಂದನೆ ಸ್ವೀಕರಿಸಿದರು. ನಂತರ ಪ್ರಾರ್ಥನೆಯೊಡನೆ ಕಾರ್ಯಕ್ರಮ ಪ್ರಾರಂಭವಾಯಿತು. ಶ್ರೀ ಎಂ.ಎ. ಖಾಲೀದ್, ರಾಜ್ಯ ಆಯುಕ್ತರು (ಸ್ಕೌಟ್ಸ್), ಎಲ್ಲರನ್ನು ಸ್ವಾಗತಿಸಿದರು. ಜಾಂಬೂರಿಯ ಮಹಾನಿರ್ದೇಶಕರಾದ ಶ್ರೀ ಪಿ. ವಿಶ್ವನಾಥ್‌ರವರು ಜಾಂಬೂರಿಯ ವರದಿಯನ್ನು ನೀಡಿದರು. ಜಾಂಬೂರಿಯ ಯಶಸ್ಸಿನಲ್ಲಿ ಗೌರವಾನ್ವಿತ ಮುಖ್ಯಮಂತ್ರಿ ಶ್ರೀ ಸಿದ್ದರಾಮಯ್ಯ ಮತ್ತು



ಕರ್ನಾಟಕ ಸರ್ಕಾರದ ಪಾತ್ರವನ್ನು ಸ್ಮರಿಸಿದರು. 17ನೇ ಜಾಂಬೂರಿಯ ಅತಿಥೇಯರು ಹಾಗೂ ಜಾಂಬೂರಿಯ ರೂವಾರಿಯಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರನ್ನು ಗಣ್ಯರು ಶ್ಲಾಘಿಸಿ ಸನ್ಮಾನಿಸಿದರು. ಜಾಂಬೂರಿಯಲ್ಲಿ ಸಮಗ್ರವಾಗಿ ಭಾಗವಹಿಸಿ ಪ್ರಥಮ ಶ್ರೇಣಿಯನ್ನು ಪಡೆದ ರಾಜಾಸ್ಥಾನಕ್ಕೆ, ದ್ವಿತೀಯ ಸ್ಥಾನ ಪಡೆದ ಉತ್ತರ ಪ್ರದೇಶಕ್ಕೆ ಅಭಿನಂದನಾ ಪೂರ್ವಕವಾಗಿ ಪ್ರಶಸ್ತಿ ಫಲಕಗಳನ್ನು ನೀಡಲಾಯಿತು.




ಶ್ರೀ ಡಿ.ಕೆ. ಶಿವಕುಮಾರ್, ಮಾನ್ಯ ಸಚಿವರು, ಇಂಧನ ಇಲಾಖೆ ಕರ್ನಾಟಕ ಸರ್ಕಾರ ಇವರು ಮಾತನಾಡಿ ಈ ಸಂಸ್ಥೆ ಯುವಶಕ್ತಿಯ ಅಭಿವೃದ್ಧಿಗಾಗಿ ಇನ್ನೂ ಹೆಚ್ಚು ಶ್ರಮಿಸಬೇಕಾಗಿದೆ. ಜಾಂಬೂರಿಯ ಫಲಪ್ರದವಾಗಿ ನಡೆದಿದೆ ಯುವಜನತೆಗೆ ಸ್ಫೂರ್ತಿ ನೀಡಿದೆ. ಯುವಜನರು ಈ ಎಲ್ಲಾ ಪ್ರೇರಣೆಗಳಿಂದ ಸ್ವತಃ ಚೆನ್ನಾಗಿ ಅಭಿವೃದ್ಧಿಯಾಗಿ ರಾಷ್ಟ್ರಾಭಿವೃದ್ಧಿಯಲ್ಲಿ ಪಾಲ್ಗೊಳ್ಳಬೇಕಾಗಿದೆ ಎಂದರು. ಆಹಾರ ಮತ್ತು ನಾಗರೀಕ ಸರಬರಾಜು ಮಂತ್ರಿಗಳಾದ ಸನ್ಮಾನ ಶ್ರೀ ಯು.ಟಿ.ಖಾದರ್ ರವರು

ವಿಶೇಷವಾಗಿ ನಮ್ಮ ಸಂಸ್ಥೆಯ ಉನ್ನತ ಪದಕವಾದ ರಾಷ್ಟ್ರಪತಿ ಪುರಸ್ಕಾರವನ್ನು ಪಡೆದವರು ಇವರು ಜಾಂಬೂರಿಯಲ್ಲಿ ಸಕ್ರಿಯವಾಗಿ ಭಾಗವಹಿಸಿದರು. ಸ್ಕೌಟ್-ಗೈಡ್‌ಗಳಿಗೆ ಅಭಿವೃದ್ಧಿಯತ್ತ ಸಾಗಿ ಜಾಂಬೂರಿ ಕೊಟ್ಟ ಪ್ರೇರಣೆ ಮತ್ತು ಅನುಭವಗಳ ಲಾಭ ಪಡೆದು ಉತ್ತಮ ನಾಗರೀಕರಾಗಿ ಉತ್ತಮ ನಾಳೆಯ ನಿರ್ಮಾಣ ಮಾಡಿ ಎಂದು ಶುಭ ಹಾರೈಸಿದರು. ಜಾಂಬೂರಿಯ ಯಶಸ್ವಿಗೆ ಕಾರಣರಾದವರನ್ನು ಅಭಿನಂದಿಸಿದರು. ರಾಜ್ಯ ಗೈಡ್ಸ್ ಆಯುಕ್ತರಾದ ಶ್ರೀಮತಿ ಗೀತಾ ನಟರಾಜ್ ಎಲ್ಲರನ್ನೂ ವಂದಿಸಿದರು.

**ಭವ್ಯಶಿಬಿರಾಗ್ನಿ:** ಸಮಾರೋಪದ ನಂತರ ಸಂಜೆ 7 ಘಂಟೆಗೆ ಭವ್ಯ ಶಿಬಿರಾಗ್ನಿ ಪ್ರಾರಂಭವಾಯಿತು. ಇದನ್ನು ಸಚಿವರಾದ ಶ್ರೀ ಯು.ಟಿ. ಖಾದರ್‌ಅವರು ಉದ್ಘಾಟಿಸಿದರು. ಪ್ರತಿ ರಾಜ್ಯದ ಮಕ್ಕಳು ವೇಷಭೂಷಣದೊಂದಿಗೆ ಅತ್ಯುತ್ಸಾಹದಿಂದ ವೈವಿಧ್ಯಮಯವಾದ ಸಂದೇಶಗಳನ್ನು ನೀಡುವ ಕಾರ್ಯಕ್ರಮಗಳನ್ನು ನೀಡಿದರು. ಈ ಕಾರ್ಯಕ್ರಮ ಕಣ್ಣಿಗೆ ಹಬ್ಬವನ್ನು ಉಂಟುಮಾಡಿತು. ಇದೊಂದು ಅವಿಸ್ಮರಣೀಯವಾದ ಕಾರ್ಯಕ್ರಮವೆಂದು ಮುಖ್ಯ ಅತಿಥಿಗಳು ಹೊಗಳಿದರು.



**ಸರ್ವಧರ್ಮ ಪ್ರಾರ್ಥನೆ:** ಜನವರಿ 04 ರಂದು ಬೆಳಗ್ಗೆ 8.00 ಘಂಟೆಗೆ ಸರ್ವಧರ್ಮ ಪ್ರಾರ್ಥನೆ ಮಾಡಲಾಯಿತು. ಇದು ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯ ಒಂದು ವಿಶೇಷ ಕಾರ್ಯಕ್ರಮ. ಈ ಕಾರ್ಯಕ್ರಮ ಕೋಮು ಸೌಹಾರ್ದತೆ, ಪರಸ್ಪರ ಧರ್ಮಗಳನ್ನು ಗೌರವಿಸುವುದಕ್ಕೆ ರೂಪಿಸಿದ ಕಾರ್ಯಕ್ರಮ. ಇದನ್ನು ಪ್ರತಿ ಶಿಬಿರ ಹಾಗು ಸಮಾರಂಭಗಳ ಕೊನೆಯ ದಿನ ಆಯೋಜಿ-ಸಲಾಗುತ್ತದೆ. ಸರಳವಾಗಿ ಸಿಂಗರಿಸಿದ ವೇದಿಕೆ ಮೇಲೆ ಪ್ರಾರ್ಥನಾ ನಾಯಕ ಮತ್ತು ಆ ಸಭೆಯಲ್ಲಿರುವ ಎಲ್ಲಾ ಧರ್ಮದ ಪ್ರತಿನಿಧಿಗಳು ಆಸೀನರಾಗಿರುತ್ತಾರೆ. ಉಳಿದವರು ಮುಂಭಾಗದಲ್ಲಿ ಶಿಸ್ತಿನಿಂದ ಸಾಲಾಗಿ ಕುಳಿತಿರುತ್ತಾರೆ. ವಾತಾವರಣ ಪ್ರಶಾಂತವಾಗಿರುತ್ತದೆ. ನಾಯಕರು ಶುಭಕೋರಿ ಪ್ರಾರ್ಥನೆಯನ್ನು ಪಾರಂಭಿಸುತ್ತಾರೆ. ಮಿಕ್ಕೆಲ್ಲರು ಅವರನ್ನು ಅನುಸರಿಸಿ ಹಾಡುತ್ತಾರೆ.

ಧರ್ಮಗ್ರಂಥ ಪಠಣಗಳ ನಂತರ ಭಕ್ತಿಗೀತೆ ಮುಂದುವರೆಯುತ್ತದೆ. ಒಂದು ನಿಮಿಷ ಮೌನ ಪ್ರಾರ್ಥನೆ ರಾಮಧುನ್ ಶಾಂತಿ ಪಠಣನಂತರ ಕಾರ್ಯಕ್ರಮ ಮುಕ್ತಾಯವಾಗುತ್ತದೆ.

ವಿಶೇಷ ಸಂಧರ್ಭಗಳಲ್ಲಿ ಧರ್ಮಗುರುಗಳನ್ನು ಆಹ್ವಾನಿಸಿ ಧರ್ಮಸಮನ್ವಯದ ಸಂದೇಶವನ್ನು ನೀಡಲಾಗುವುದು. ಸುತ್ತೂರು ಮಹಾಸಂಸ್ಥಾನದ ಶ್ರೀ ಶಿವರಾತ್ರಿ ದೇಶಿಕೇಂದ್ರ ಸ್ವಾಮೀಜಿಯವರು "ಧರ್ಮಗಳು ಯಾವುದಾದರೂ ಅದರಲ್ಲಿ ದಯೆ ಎದ್ದು ಕಾಣುತ್ತದೆ. ಈ ತತ್ವವನ್ನು ಎಲ್ಲರಿಗೂ ಹೇಳಿ. ಜಾತ್ಯಾತೀತ ರಾಷ್ಟ್ರದಲ್ಲಿ ನಾವೆಲ್ಲರೂ ಒಂದೇ, ನಾವೆಲ್ಲರೂ ಭಾರತಿಯರು ಎಂದು ಒಗ್ಗಟಿನಿಂದ ಬಾಳಿ ಪ್ರಗತಿಯನ್ನು ಸಾಧಿಸಿ" ಎಂದು ಆಶೀರ್ವದಿಸಿದರು.



ಆದಿಚುಂಚನಗಿರಿ ಮೈಸೂರು ಶಾಖಾ ಮಠದ ಶ್ರೀ ಸೋಮೇಶ್ವರನಾಥ ಸ್ವಾಮೀಜಿ ಮಾತನಾಡಿ "ನಮ್ಮನ್ನು ನಾವು ತಿದ್ದಿಕೊಂಡು ಉತ್ತಮ ಮೂರ್ತಿಯಾಗಲು ಜಾಂಬೂರಿಯಂತಹ ಉತ್ಸವ ಅನಿವಾರ್ಯವಾಗಿದೆ. ಈ ರೀತಿಯ ಕಾರ್ಯಕ್ರಮಗಳಿಂದ ಉತ್ತಮ ಯುವಪೀಳಿಗೆಯನ್ನು ಸೃಷ್ಟಿಸಲು ಸಾಧ್ಯವಿದೆ" ಎಂದರು.

ಮೈಸೂರು ಸಂತ ಫಿಲೋಮಿನಾಸ್ ಚರ್ಚಿನ ಆರ್ಚ್ ಬಿಷಪ್ ಅಂಥೋಣಿ ವಾಜುಪಿಳ್ಳೆ ಮಾತನಾಡಿ "ವಿಶ್ವದೆಲ್ಲೆಡೆ ಸ್ವಾರ್ಥ ಹೆಚ್ಚಾಗುತ್ತಿದೆ. ಸಮಾಜದಲ್ಲಿ ಭ್ರಷ್ಟಾಚಾರ ಇದನ್ನು ಸಾಕ್ಷೀಕರಿಸುತ್ತದೆ. ಇಂತಹ ಸನ್ನಿವೇಶದಲ್ಲಿ ಸಹಬಾಳ್ವೆ ಸಮಾನತೆ ರಾಷ್ಟ್ರೀಯ ಭಾವೈಕ್ಯತಾ ಭಾವನೆಗಳನ್ನು ಮೂಡಿಸುವುದು ಅತ್ಯಗತ್ಯ" ಎಂದರು.



ಭಾರತ್ ಸ್ಕೌಟ್ ಗೈಡ್‌ನ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ. ಪಿ.ಜಿ.ಆರ್. ಸಿಂಧ್ಯ, ಜಿಲ್ಲಾ ಮುಖ್ಯ ಆಯುಕ್ತರು ಹಾಗು ಜಾಂಬೂರಿಯ ಮಹಾ ಕಾರ್ಯದರ್ಶಿ ಶ್ರೀ.ಪಿ.ವಿಶ್ವನಾಥ, ಶ್ರೀ.ಕೊಂಡಜ್ಜಿ.ಬಿ.ಷಣ್ಮುಖಪ್ಪ, ರಾಷ್ಟ್ರೀಯ ನಿರ್ದೇಶಕರಾದ ಶ್ರೀ.ಕೆ.ಸುಕುಮಾರ ಹಾಗು ರಾಷ್ಟ್ರೀಯ ಮತ್ತು ರಾಜ್ಯದ ಹಲವಾರು ಪದಾಧಿಕಾರಿಗಳು ಪ್ರಾರ್ಥನೆಯಲ್ಲಿ ಭಾಗವಹಿಸಿದರು.

**ಕೃತಜ್ಞತೆ:** ರಾಷ್ಟ್ರೀಯ ಸಂಸ್ಥೆಯ ಪ್ರಧಾನ ರಾಷ್ಟ್ರೀಯ ಆಯುಕ್ತರು ಮತ್ತು ಪದಾಧಿಕಾರಿಗಳು ಜಾಂಬೂರಿಯನ್ನು ಆಯೋಜಿಸಲು ಅವಕಾಶ ನೀಡಿದ್ದಕ್ಕೆ, ಕರ್ನಾಟಕ ಸರ್ಕಾರದ ಮಾನ್ಯ ಮುಖ್ಯ ಮಂತ್ರಿಗಳಾದ ಶ್ರೀ ಸಿದ್ದರಾಮಯ್ಯ ನವರು ಮತ್ತು ಮಂತ್ರಿಮಂಡಲದ ಇತರ ಸಚಿವರುಗಳಿಗೆ, ಸರ್ಕಾರದ ವಿವಿಧ ಇಲಾಖೆಗಳಿಗೆ ಮೈಸೂರು ಜಿಲ್ಲಾಡಳಿತಕ್ಕೆ, "ನಭೂತೊ ಎಂಬಂತಹ ನಗರ ನಿರ್ಮಾಣ ಮಾಡಿದಕ್ಕೆ ಇತರ ಸಂಘ ಸಂಸ್ಥೆಗಳಿಗೆ ಅವರುಗಳು ನೀಡಿದ ಸಕ್ರಿಯ ಸಹಕಾರಕ್ಕೆ, ರಾಜ್ಯ ಮುಖ್ಯ ಆಯುಕ್ತರು ಮತ್ತು ಜಾಂಬೂರಿಯ ರೂವಾರಿಗಳಾದ ಶ್ರೀ.ಪಿ.ಜಿ.ಆರ್ ಸಿಂಧ್ಯ ಮತ್ತು ಅವರ ಪದಾಧಿಕಾರಿಗಳ ಬೃಹತ್ ತಂಡಕ್ಕೆ, ಸ್ವಯಂ ಸೇವಕರುಗಳಿಗೆ, ಹಿತೈಷಿಗಳಿಗೆ, ದಾನಿಗಳಿಗೆ ನಮ್ಮ ಪೋಷಕ ಇಲಾಖೆಯಾದ ಶಿಕ್ಷಣ ಇಲಾಖೆಯ ಅಧಿಕಾರಿಗಳು ನೀಡಿದ ಸಹಕಾರಕ್ಕೆ ಉನ್ನತ ಶಿಕ್ಷಣ ಇಲಾಖೆಯ ಕಾರ್ಯದರ್ಶಿಗಳಾದ ಶ್ರೀ ಅಜಯ್ ಸೇಠ್ ಅವರ ಮಾರ್ಗದರ್ಶನಕ್ಕೆ, ಮುಖ್ಯ ಸಮನ್ವಯಾಧಿಕಾರಿಯಾದ ಶ್ರೀ ಪಿ.ಸಿ.ಜಾಫರ್ ಯೋಜನಾ ನಿರ್ದೇಶಕರು, ಸರ್ವಶಿಕ್ಷಣ ಅಭಿಯಾನ ಅವರು ಸ್ಪಷ್ಟ ನಿರ್ದೇಶನಕ್ಕೆ, ಮಕ್ಕಳಿಗೆ ತರಬೇತಿ ನೀಡಿದ ಸ್ಕೌಟ್-ಗೈಡ್ ಶಿಕ್ಷಕರು ಭಾರತದ ಮೂಲೆ ಮೂಲೆಗಳಿಂದ ಮಕ್ಕಳನ್ನು ಕರೆದುಕೊಂಡು ಬಂದು ಸುರಕ್ಷಿತವಾಗಿ ಮರಳಿ ಹೋಗಿದ್ದಕ್ಕೆ, ವಿವಿಧ ಇಲಾಖೆಗಳಿಗೆ, ಉಪಸಮಿತಿಗಳಿಗೆ ಜಾಂಬೂರಿಯಲ್ಲಿ ಊಟ, ಉಪಾಹಾರ, ಆರೋಗ್ಯ, ಸುರಕ್ಷತೆ, ನೀರು, ವಿದ್ಯುತ್, ಶೌಚ, ಸ್ನಾನ ಗೃಹ ನಿರ್ವಹಣೆಯನ್ನು ಉತ್ತಮ ಮಟ್ಟದಲ್ಲಿ ಮಾಡಿದ್ದಕ್ಕೆ ಹಾಗೂ ಮಾಧ್ಯಮ ಮಿತ್ರರು ಜಾಂಬೂರಿಯ ಪ್ರಚಾರ ಮತ್ತು ಪ್ರಸಾರ ಕಾರ್ಯವನ್ನು ಉತ್ತಮ ರೀತಿಯಲ್ಲಿ ಮಾಡಿದ್ದಕ್ಕೆ, ರಾಷ್ಟ್ರೀಯ ಹಾಗು ರಾಜ್ಯ ಮಟ್ಟದ ಸ್ಮರಣ ಸಂಚಿಕೆಯ ಸಮಿತಿ ಜಾಂಬೂರಿಯ ಸವಿನೆನಪು ಮತ್ತು ಚಳವಳಿಯ ಪರಿಚಯ ಮಾಡುತ್ತಿರುವುದಕ್ಕೆ, ಮಕ್ಕಳ ಸೇವೆಯೇ ದೇವರ ಸೇವೆ ಮತ್ತು ದೇಶಸೇವೆ ಎಂದು ಮಾಡಿದ ಸೇವಾಕಾರ್ಯಕ್ಕೆ ರಾಷ್ಟ್ರ ಮತ್ತು ರಾಜ್ಯ ಸಂಸ್ಥೆಯ ಪದಾಧಿಕಾರಿಗಳು ತಮ್ಮೆಲ್ಲರಿಗೂ ಚಿರಋಣಿಯಾಗಿದ್ದೇವೆ. ಭಗವಂತನು ನಿಮ್ಮೆಲ್ಲರನ್ನು ಆಶೀರ್ವದಿಸಲಿ ಎಂದು ನಾವೆಲ್ಲರೂ ಹಾರೈಸುತ್ತೇವೆ.

**ಕಾಲೇಜು ಶಿಕ್ಷಣ ಇಲಾಖೆ, ಕರ್ನಾಟಕ ಸರ್ಕಾರ ಹಾಗೂ ಭಾರತ್ ಸ್ಕೌಟ್ಸ್-ಗೈಡ್ಸ್ ಕರ್ನಾಟಕ ಇವರ ಸಂಯುಕ್ತಾಶ್ರಯದಲ್ಲಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ರೋವರ್ಸ್-ರೇಂಜರ್ಸ್ ಸಂಚಾಲಕರಾಗಿ ಕಾರ್ಯನಿರ್ವಹಿಸುತ್ತಿರುವ ಅಧ್ಯಾಪಕರುಗಳಿಗೆ ಒಂದು ದಿನದ "ಮಾಹಿತಿ ಶಿಬಿರ"ವನ್ನು ಈ ಕೆಳಕಂಡ ಸ್ಥಳ ಹಾಗೂ ದಿನಾಂಕಗಳಲ್ಲಿ ಏರ್ಪಡಿಸಲಾಗಿದೆ.**

| ಪ್ರಾದೇಶಿಕ ಕಛೇರಿ | ಕಾರ್ಯಾಗಾರ ನಡೆಯುವ ಸ್ಥಳ | ದಿನಾಂಕ ಮತ್ತು ಸಮಯ | ಹೆಚ್ಚಿನ ವಿವರಗಳಿಗಾಗಿ |
|---|---|---|---|
| ಬೆಂಗಳೂರು | ಕೊಂಡಜ್ಜಿ ಬಸಪ್ಪ ಸಭಾಂಗಣ, ಭಾರತ್ ಸ್ಕೌಟ್ಸ್-ಗೈಡ್ಸ್, ರಾಜ್ಯ ಮುಖ್ಯ ಕಛೇರಿ, # 39 ಶಾಂತಿಗೃಹ, ಮಹಾರಾಣಿ ವಿಜ್ಞಾನ ಕಾಲೇಜು ಹತ್ತಿರ, ಅರಮನೆ ರಸ್ತೆ, ಬೆಂಗಳೂರು-560 001 | 02.05.2017<br>ಬೆಳಗ್ಗೆ 10 ಗಂಟೆಗೆ | ಶ್ರೀ ಎಲ್.ಟಿ. ಲೋಕೇಶ್<br>ಮೊ. 9449886981<br>ಶ್ರೀಮತಿ ಕೆ.ವಿ. ಶಾಮಲ<br>ಮೊ. 9980237570 |
| ಮೈಸೂರು | ದಿ ಭಾರತ್ ಸ್ಕೌಟ್ಸ್-ಗೈಡ್ಸ್ ಕಛೇರಿ, ಜಯಚಾಮರಾಜೇಂದ್ರ ಸ್ಕೌಟ್ ಭವನ, ಜಿಲ್ಲಾಧಿಕಾರಿ ಕಛೇರಿ ಹತ್ತಿರ, ಮೈಸೂರು-05 | 03.05.2017<br>ಬೆಳಗ್ಗೆ 10 ಗಂಟೆಗೆ | ಶ್ರೀ ಪಿ. ಚಂದ್ರು<br>ಮೊ. 9738561878<br>ಶ್ರೀ ರಾಮ್‌ಪ್ರಸಾದ್<br>ಮೊ. 8904319329 |
| ಶಿವಮೊಗ್ಗ | ಸರ್ಕಾರಿ ಪ್ರಥಮ ದರ್ಜೆ ಮಹಿಳಾ ಕಾಲೇಜು, ವಿದ್ಯಾನಗರ, ಆಂಜನೇಯ ಬಡಾವಣೆ, ದಾವಣಗೆರೆ | 04.05.2017<br>ಬೆಳಗ್ಗೆ 10 ಗಂಟೆಗೆ | ಶ್ರೀ ಶಂಕರ್‌ನಾಯಕ್<br>ಮೊ. 9743207153<br>ಶ್ರೀ ಟಿ.ಎಸ್. ಶಿವಣ್ಣ<br>ಮೊ. 944823300 |
| ಮಂಗಳೂರು | ದಿ ಭಾರತ್ ಸ್ಕೌಟ್ಸ್-ಗೈಡ್ಸ್ ಕಛೇರಿ, ಜಿಲ್ಲಾ ಮುಖ್ಯ ಕಛೇರಿ ನೆಹರು ಅವೆನ್ಯೂ ರಸ್ತೆ, ಲಾಲ್‌ಬಾಗ್, ಮಂಗಳೂರು-575003 | 04.05.2017<br>ಬೆಳಗ್ಗೆ 10 ಗಂಟೆಗೆ | 0824-2454400<br>ಶ್ರೀ ಭರತ್‌ರಾಜ್ ಡಿ.ಓ.<br>ಮೊ. 9663923412 |
| ಧಾರವಾಡ | ದಿ ಭಾರತ್ ಸ್ಕೌಟ್ಸ್-ಗೈಡ್ಸ್ ಕಛೇರಿ, ಜಿಲ್ಲಾ ಮುಖ್ಯ ಕಛೇರಿ ಜಿಲ್ಲಾ ಮುಖ್ಯ ಕಛೇರಿ, ಸಿವಿಲ್ ಕೋರ್ಟ್ ಎದುರು, ಧಾರವಾಡ | 05.05.2017<br>ಬೆಳಗ್ಗೆ 10 ಗಂಟೆಗೆ | ಶ್ರೀ ಎಂ.ಎಂ. ಲೋಂಡೆ,<br>ಮೊ. 9880633383<br>ಶ್ರೀ ಸಿದ್ಧಪ್ಪ ಪೂಜಾರ್<br>9008070665 |
| ಕಲಬುರಗಿ | ಗುಲ್ಬರ್ಗ-ವಿಶ್ವವಿದ್ಯಾಲಯ, ಕಲಬುರಗಿ | 06.05.2017<br>ಬೆಳಗ್ಗೆ 10 ಗಂಟೆಗೆ | ಶ್ರೀ ವೀರಭದ್ರಯ್ಯ,<br>ಮೊ. 9343286784<br>ಶ್ರೀ ಜಯಶ್ರೀ ಗೋಗಿ<br>ಮೊ. 7760992045 |

## ಗಮನಿಸಿ

**ಹೊಸದಾಗಿ ಮುದ್ರಿಸಿರುವ ಸ್ಕೌಟ್ಸ್-ಗೈಡ್ಸ್ ಲಾಗ್ ಪುಸ್ತಕಗಳು ರಾಜ್ಯ ಸಂಸ್ಥೆ ಸಾಮಾಗ್ರಿ ಮಳಿಗೆಯಲ್ಲಿ ಲಭ್ಯವಿರುತ್ತವೆ ದರಗಳು ಈ ಕೆಳಗಿನಂತಿರುತ್ತವೆ.**

**ಸ್ಕೌಟ್ಸ್ ಲಾಗ್ ಬುಕ್ ಭಾಗ - 1 ರೂ. 50/-**
**ಸ್ಕೌಟ್ಸ್ ಲಾಗ್ ಬುಕ್ ಭಾಗ - 2 ರೂ. 30/-**
**ಗೈಡ್ಸ್ ಲಾಗ್ ಬುಕ್ ಭಾಗ - 1 ರೂ. 60/-**
**ಗೈಡ್ಸ್ ಲಾಗ್ ಬುಕ್ ಭಾಗ - 2 ರೂ. 45/-**

**- ರಾಜ್ಯ ಕಾರ್ಯದರ್ಶಿ**

# ಜಿಲ್ಲಾ ವಾರ್ತೆಗಳು

## ಬಳ್ಳಾರಿ

ಫೆಬ್ರವರಿ 27 ರಂದು ರಾಜ್ಯ ಮುಖ್ಯ ಆಯುಕ್ತರು ಹಾಗೂ ಮಾಜಿ ಮಂತ್ರಿಗಳಾದ ಶ್ರೀ ಪಿ.ಜಿ.ಆರ್. ಸಿಂಧ್ಯಾರವರು ಬಳ್ಳಾರಿಗೆ ಆಗಮಿಸಿ ಜಿಲ್ಲಾ ಸಂಸ್ಥೆಯ ಅಭಿವೃದ್ಧಿ ಹಾಗೂ ಇತರೆ ವಿಷಯಗಳ ಬಗ್ಗೆ ಸಂವಾದ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ಈ ಸಮಯದಲ್ಲಿ ಜಿಲ್ಲಾ ಮುಖ್ಯ ಆಯುಕ್ತರು ಹಾಗೂ ಉಪನಿರ್ದೇಶಕರಾದ ಶ್ರೀ ಎ. ಶ್ರೀಧರನ್ ಇವರನ್ನು ಸನ್ಮಾನಿಸಲಾಯಿತು. ಜಿಲ್ಲೆಯ ಪ್ರತಿಯೊಂದು ಶಾಲೆಗಳಲ್ಲಿ ಸ್ಕೌಟ್-ಗೈಡ್, ಕಬ್-ಬುಲ್‌ಬುಲ್ ಘಟಕಗಳನ್ನು ಪ್ರಾರಂಭಿಸುವುದಾಗಿ ಉಪನಿರ್ದೇಶಕರು ತಿಳಿಸಿದರು. ಜಿಲ್ಲಾ ಸಂಸ್ಥೆಯ ವತಿಯಿಂದ ಶ್ರೀ ಪಿ.ಜಿ.ಆರ್. ಸಿಂಧ್ಯಾರವನ್ನು ಸನ್ಮಾನಿಸಲಾಯಿತು.

## ಬೆಂಗಳೂರು ದಕ್ಷಿಣ



ವಿಶ್ವ ಜಲ ದಿನಾಚರಣೆಯ ಅಂಗವಾಗಿ ಆರ್ಚರ್ಡ್ ಶಾಲೆಯ ಸ್ಕೌಟ್-ಗೈಡ್‌ಗಳು ಬ್ಯಾನರ್ ಹಾಗೂ ಭಿತ್ತಿಪತ್ರದೊಂದಿಗೆ ಪಥ ಸಂಚಲನೆ ಮಾಡುತ್ತಾ "ನೀರು ಉಳಿಸಿ-ಜೀವ ಉಳಿಸಿ" ಎಂಬ ಘೋಷಣೆಯೊಂದಿಗೆ ಸಾರ್ವಜನಿಕರಲ್ಲಿ ನೀರಿನ ಬಗ್ಗೆ ಜಾಗೃತಿ ಮೂಡಿಸುವ ಕಾರ್ಯವನ್ನು ಹಮ್ಮಿಕೊಂಡಿದ್ದು ಈ ಕಾರ್ಯಕ್ರಮವು ಕೋಣನಕುಂಟೆ ಕ್ರಾಸಿನಿಂದ ಪ್ರಾರಂಭವಾಗಿ ಅಲ್ಲಿನ ನೆರೆವಲಯದಿಂದ ನಾಯ್ಡು ಲೇಔಟ್, ಸಿದ್ಧಪ್ಪ ಲೇಔಟ್, ದೊಡ್ಡಕಲ್ಲಸಂದ್ರ, ವಸಂತಪುರ, ಜಿಕಾಸಿಪುರ ಹಾಗೂ ಇಸ್ರೋ ಲೇಔಟ್‌ಗಳ 600 ಮನೆಗಳಿಗೆ ಭೇಟಿ ಮಾಡಿ ನೀರಿನ ಪ್ರಾಮುಖ್ಯತೆಯ ಬಗ್ಗೆ ವಿವರಣೆ ನೀಡುತ್ತಾ ಬಟ್ಟೆ ಒಗೆಯುವ ನೀರು ಹಾಗೂ ಅಡುಗೆಗೆ ಬಳಸುವ ನೀರನ್ನು ಯಾವ ರೀತಿ ಮರು ಬಳಕೆ ಮಾಡಬೇಕು ಮತ್ತು ಮಳೆ ನೀರಿನ ಸದ್ಬಳಕೆಯ ಬಗ್ಗೆ ಉಪಯುಕ್ತ ಮಾಹಿತಿಯನ್ನು ಸಾರ್ವಜನಿಕರಿಗೆ ನೀಡಲಾಯಿತು.

## ಚಾಮರಾಜನಗರ



* ಸನ್ಮಾನ್ಯ ಶ್ರೀ ಯು.ಟಿ. ಖಾದರ್, ಮಾನ್ಯ ಆಹಾರ ಮತ್ತು ನಾಗರಿಕ ಸರಬರಾಜು ಹಾಗೂ ಗ್ರಾಹಕರ ವ್ಯವಹಾರಗಳ ಸಚಿವರು, ಕರ್ನಾಟಕ ಸರ್ಕಾರ, ಇವರನ್ನು ಚಾಮರಾಜ ನಗರ ಜಿಲ್ಲಾ ಸಂಸ್ಥೆ ಪರವಾಗಿ ಸ್ವಾಗತಿಸಲಾಯಿತು. ಜಿಲ್ಲಾ ಕಾರ್ಯದರ್ಶಿ ಶ್ರೀ ವಿ.ಎಂ. ರಾಮಚಂದ್ರ, ಜಿಲ್ಲಾ ಸಂಘಟಕರು (ಗೈ) ಶ್ರೀಮತಿ ಪಿ. ಕಮಲಮ್ಮ ಹಾಗೂ ಜಿಲ್ಲಾ ಸಂಘಟಕರು(ಸ್ಕೌ) ಶ್ರೀ ಎನ್. ಅಶೋಕ ಕುಮಾರ್ ಜಿಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು.



ಚಾಮರಾಜನಗರ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳಾಗಿ ಅಧಿಕಾರ ವಹಿಸಿಕೊಂಡ ಡಾ. ಹರೀಶ್ ಕುಮಾರ್ ರವರನ್ನು ಜಿಲ್ಲಾ ಸಂಸ್ಥೆಯ ಪರವಾಗಿ ಸ್ವಾಗತಿಸಲಾಯಿತು. ಜಿಲ್ಲಾ ಕಾರ್ಯದರ್ಶಿ ಶ್ರೀ ವಿ.ಎಂ. ರಾಮಚಂದ್ರ, ಜಿಲ್ಲಾ ಸಂಘಟಕರು (ಗೈ)

ಶ್ರೀಮತಿ ಪಿ. ಕಮಲಮ್ಮ ಹಾಗೂ ಜಿಲ್ಲಾ ಸಂಘಟಿಕರು (ಸ್ಕೌ) ಶ್ರೀ ಎನ್. ಅಶೋಕ ಕುಮಾರ್ ಮತ್ತು ಜಿಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು.

* ಭಾರತ್ ಸ್ಕೌಟ್ಸ್-ಗೈಡ್ಸ್, ಚಾಮರಾಜನಗರ ಜಿಲ್ಲಾ ಸಂಸ್ಥೆ, ಚಾಮರಾಜನಗರ ಮತ್ತು ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ, ಯಳಂದೂರು ಇವರ ಸಹಯೋಗದಲ್ಲಿ ಜಿಲ್ಲಾ ಮಟ್ಟದ ರ್‍ಯಾಲಿ ಮತ್ತು ಸಂಸ್ಥಾಪಕರ ಜನ್ಮೋತ್ಸವ ದಿನಾಚರಣೆಯನ್ನು ಮಾರ್ಚ್ 11 ಮತ್ತು 12 ರಂದು ಎಸ್.ಡಿ.ವಿ.ಎಸ್ ಶಿಕ್ಷಣ ಸಂಸ್ಥೆ ಯಳಂದೂರು ಇಲ್ಲಿ ಆಯೋಜಿಸಲಾಗಿತ್ತು. ಈ ರ್‍ಯಾಲಿಯಲ್ಲಿ ಒಟ್ಟು 400 ಕಬ್ಸ್, ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ ಹಾಗೂ ಸ್ಕೌಟರ್ಸ್-ಗೈಡರ್ಸ್ ಭಾಗವಹಿಸಿದ್ದರು. ಮಾರ್ಚ್ 11 ರಂದು ಸಂಜೆ 6.30ಕ್ಕೆ ಯಳಂದೂರು ಮುಖ್ಯರಸ್ತೆಗಳಲ್ಲಿ "ಕ್ಯಾಂಡಲ್ ಲೈಟ್" ಪಥ ಸಂಚಲನಾ ಕಾರ್ಯಕ್ರಮ ಜರುಗಿತು. ಶ್ರೀ ಶಿವಸ್ವಾಮಿ, ವೃತ್ತ ಆರಕ್ಷಕ ನಿರೀಕ್ಷಕರು, ಯಳಂದೂರು ಈ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಅಂದು ರಾತ್ರಿ ಶಿಬಿರಾಗ್ನಿ ಕಾರ್ಯಕ್ರಮವನ್ನು ಶ್ರೀ ವಿ. ಮಲ್ಲಿಕಾರ್ಜುನ ಸ್ವಾಮಿ, ಜಿಲ್ಲಾ ಆಯುಕ್ತರು(ಸ್ಕೌ) ರವರು ಉದ್ಘಾಟಿಸಿದರು.



ಮಾರ್ಚ್ 11 ರಂದು ಬೆಳಿಗ್ಗೆ 7.30ಕ್ಕೆ ಸರ್ವಧರ್ಮ ಪ್ರಾರ್ಥನೆ, ಕಾರ್ಯಕ್ರಮ ಶ್ರೀ ನಿ.ಪ್ರ. ತೋಂಟದಾರ್ಯಸ್ವಾಮಿ, ಕೆಸ್ತೂರು ಮಠ, ಶ್ರೀ ಮಹಮದ್ ಜಿಯಾವುಲ್ಲ, ಅಧ್ಯಕ್ಷರು ಮಸೀದಿ ಕೆ.ಪಿ. ಮೊಹಲ್ಲ, ಚಾಮರಾಜನಗರ ಇವರುಗಳ ಸಾನ್ನಿಧ್ಯದಲ್ಲಿ ಜರುಗಿತು. ಶ್ರೀ ವಿ. ಮಲ್ಲಿಕಾರ್ಜುನಸ್ವಾಮಿ ಜಿಲ್ಲಾ ಆಯುಕ್ತರು(ಸ್ಕೌ) ರವರು ಉಪಸ್ಥಿತರಿದ್ದರು. ಶ್ರೀ ವೀರಭದ್ರಪ್ಪ, ಸಮಾಜ ಸೇವಾಕರ್ತರು, ಯಳಂದೂರು ಸಾಹಸ ಚಟುವಟಿಕೆಗಳನ್ನು ಜ್ಯೋತಿ ಬೆಳಗಿಸುವುದರ ಮೂಲಕ ಉದ್ಘಾಟಿಸಿದರು. ಶ್ರೀ ಬಿ. ಷರಾಫ್ ಮಾದಪ್ಪ, ಜಿಲ್ಲಾ ತರಬೇತಿ ಆಯುಕ್ತರು (ಸ್ಕೌ), ಶ್ರೀ ಕೆ.ಎಸ್. ಮಹಾದೇವ ಸ್ವಾಮಿ, ಶ್ರೀ ಹೆಚ್.ಎಲ್. ನರಸಿಂಹಯ್ಯ, ಶ್ರೀ ರೇಚಣ್ಣ, ಶ್ರೀಮತಿ ಎಂ.ಎನ್. ನಾಗರತ್ನಮ್ಮ, ಜಿಲ್ಲಾ ತರಬೇತಿ ಆಯುಕ್ತರು(ಗೈಡ್), ಶ್ರೀ ನಾಗರಾಜು, ಶ್ರೀ ನಾಗೇಂದ್ರರವರು ಉಪಸ್ಥಿತರಿದ್ದರು.

ಸಂಜೆ ನಡೆದ ಮುಕ್ತಾಯ ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ವಿ. ಮಲ್ಲಿಕಾರ್ಜುನಸ್ವಾಮಿ ಜಿಲ್ಲಾ ಆಯುಕ್ತರು(ಸ್ಕೌ) ರವರು ವಹಿಸಿದ್ದರು. ಹಿಮಾಲಯ ವೃಕ್ಷಮಣಿ ತರಬೇತಿ ಪೂರೈಸಿದ ಶ್ರೀ ನಂಜುಂಡಸ್ವಾಮಿಯವರಿಗೆ ಪ್ರಮಾಣ ಪತ್ರ ಹಾಗೂ ಮಣಿಗಳನ್ನು ನೀಡಲಾಯಿತು. ಗೈಡ್ ವಿಭಾಗಕ್ಕೆ ಶ್ರೀಮತಿ ದಾಕ್ಷಾಯಿಣಿ, ಸ್ಕೌಟ್ ವಿಭಾಗಕ್ಕೆ ಶ್ರೀ ಬಿ. ಷರಾಫ್ ಮಾದಪ್ಪ, ಜಿಲ್ಲಾ ತರಬೇತಿ ಆಯುಕ್ತರು(ಸ್ಕೌ), ರೋವರ್, ರೇಂಜರ್ ವಿಭಾಗಕ್ಕೆ ಶ್ರೀ ಎನ್. ಅಶೋಕ ಕುಮಾರ್, ಬುಲ್‌ಬುಲ್ ವಿಭಾಗಕ್ಕೆ ಶ್ರೀಮತಿ ಎಂ.ಎನ್. ನಾಗರತ್ನಮ್ಮ ಜಿಲ್ಲಾ ತರಬೇತಿ ಆಯುಕ್ತರು(ಗೈ), ಕಬ್ ವಿಭಾಗಕ್ಕೆ ಶ್ರೀ ಕೆ.ಎಸ್. ಮಹಾದೇವ ಸ್ವಾಮಿ, ನಾಯಕರಾಗಿ ಕರ್ತವ್ಯ ನಿರ್ವಹಿಸಿದರು.

* ಫೆಬ್ರವರಿ 22 ರಂದು ಜಿ.ಹೆಚ್.ಪಿ.ಎಸ್. ಉಪ್ಪಾರ ಬೀದಿ ಶಾಲೆಯಲ್ಲಿ ಸ್ಥಳೀಯ ಸಂಸ್ಥೆ ಚಾಮರಾಜನಗರ ಕ್ಯಾಂಪೋರಿ ಜರುಗಿತು. ಸನ್ಮಾನ್ಯ ಶ್ರೀ ಜಿ.ಆರ್. ಅಶ್ವಥ್ ನಾರಾಯಣ ಹಾಗೂ ಶ್ರೀ ಕೆ.ಎಸ್. ಮಹಾದೇವಸ್ವಾಮಿ, ಶ್ರೀ ರೇಚಣ್ಣ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ನೇತೃತ್ವದಲ್ಲಿ ಜರುಗಿತು. ಕ್ಯಾಂಪೋರಿಯಲ್ಲಿ 300 ಮಕ್ಕಳು ಭಾಗವಹಿಸಿದ್ದರು.

* ಫೆಬ್ರವರಿ 22 ರಂದು ಜಿ.ಹೆಚ್.ಪಿ.ಎಸ್ ಅಮಚವಾಡಿಯಲ್ಲಿ ವಿಶ್ವ ಚಿಂತನಾ ದಿನವನ್ನು ಆಚರಿಸಲಾಯಿತು. ಸ್ಕೌಟ್ ಮಾಸ್ಟರ್ ನೇತೃತ್ವದಲ್ಲಿ ಸ್ವಚ್ಛತಾ ಕಾರ್ಯಕ್ರಮ ಜರುಗಿತು.

* ಫೆಬ್ರವರಿ 23 ರಂದು ಜೆ.ಎಸ್.ಎಸ್. ಮಹಿಳಾ ಕಾಲೇಜು, ಚಾಮರಾಜನಗರದಲ್ಲಿ ರೇಂಜರ್ ಘಟಕ ಹಾಗೂ ಆಂತರಿಕ ಗುಣಮಟ್ಟ ಖಾತರಿ ಸಮಿತಿ ವತಿಯಿಂದ "ಏಡ್ಸ್ ಅರಿವು ಮತ್ತು ಜಾಗೃತಿ ವಿಶೇಷೋಪನ್ಯಾಸ"

ಕಾರ್ಯಕ್ರಮವನ್ನು ಆಯೋಜಿಸಿದ್ದರು. ಡಾ. ರೇಣುಕಾದೇವಿ ಸಿ.ಎನ್., ಪ್ರಸೂತಿ ಮತ್ತು ಸ್ತ್ರೀರೋಗ ತಜ್ಞರು, ಸರ್ಕಾರಿ ಸಮುದಾಯ ಆರೋಗ್ಯ ಕೇಂದ್ರ, ಸಂತೆಮರಹಳ್ಳಿ ಇವರು ಕಾರ್ಯಕ್ರಮವನ್ನು ಉದ್ಘಾಟನೆ ಮಾಡಿದರು.

ಶ್ರೀ ರಾಮಚಂದ್ರ ವಿ.ಎಂ. ಜಿಲ್ಲಾ ಕಾರ್ಯದರ್ಶಿ ಭಾರತ್ ಸ್ಕೌಟ್ಸ್-ಗೈಡ್ಸ್ ಚಾಮರಾಜನಗರ ಇವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಶ್ರೀಮತಿ ಗಾಯಿತ್ರಿ ದೇವಿ ಎನ್., ಸಂಯೋಜಕರು ಆಂತರಿಕ ಗುಣಮಟ್ಟ ಖಾತರಿ ಸಮಿತಿ ಹಾಗೂ ಪ್ರೊ. ಎ.ಜೆ. ಶಿವಕುಮಾರ್, ಪ್ರಾಂಶುಪಾಲರು ಜೆ.ಎಸ್.ಎಸ್. ಮಹಿಳಾ ಕಾಲೇಜು, ಚಾಮರಾಜನಗರ ಇವರು ಉಪಸ್ಥಿತರಿದ್ದರು.

* ಮಾರ್ಚ್ 9 ರಂದು ಗುಂಡ್ಲುಪೇಟೆಯಲ್ಲಿ ನಡೆದ 5ನೇ ತಾಲ್ಲೂಕು ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಮೊರಾರ್ಜಿ ದೇಸಾಯಿ ವಸತಿ ಶಾಲೆ, ತೆರಕಣಾಂಬಿ ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳು ಅಲ್ಲಿ ನೆರೆದಿದ್ದ ಜನರಿಗೆ ನೀರು ಮತ್ತು ಆಹಾರ ವಿತರಣೆಯಲ್ಲಿ ಸಹಾಯ ಮಾಡಿದರು.

## ಚಿಕ್ಕಬಳ್ಳಾಪುರ

ಮಾರ್ಚ್ 15 ರಿಂದ 18 ರ ವರೆಗೆ ಜಿಲ್ಲಾ ಮಟ್ಟದ ರೋವರ್ಸ್ ಮತ್ತು ರೇಂಜರ್ಸ್‌ಗಳ ಸಮಾಗಮವನ್ನು ಸೌತ್ ವೆಸ್ಟ್ರರ್ನ್ ರೈಲ್ವೆ, ಭಾರತ್ ಸ್ಕೌಟ್ಸ್-ಗೈಡ್ಸ್ ರಾಜ್ಯ ತರಬೇತಿ ಕೇಂದ್ರ, ಕ್ಯಾಸಲ್ ರಾಕ್, ಉತ್ತರ ಕನ್ನಡ ಜಿಲ್ಲೆಯಲ್ಲಿ ಆಯೋಜಿಸಲಾಗಿತ್ತು.

ಜಿಲ್ಲಾ ಮಟ್ಟದ ರೋವರ್ಸ್ ಮತ್ತು ರೇಂಜರ್ಸ್‌ಗಳ ಸಮಾಗಮದಲ್ಲಿ 86 ರೋವರ್ಸ್ ಮತ್ತು ರೇಂಜರ್ಸ್ ಭಾಗವಹಿಸಿದ್ದರು. ಸಮಾಗಮದ ನಾಯಕರಾಗಿ ಶ್ರೀ ಡೇನಿಯಲ್ ಸುಕುಮಾರ್ ರವರು ಕಾರ್ಯ ನಿರ್ವಹಿಸಿದರು.

ಜಿಲ್ಲಾ ಮಟ್ಟದ ನಿಪುಣ್ ಪರೀಕ್ಷಾ ಶಿಬಿರದಲ್ಲಿ ಒಟ್ಟು 87 ಮಂದಿ ರೋವರ್ಸ್ ಮತ್ತು ರೇಂಜರ್ಸ್ ಪಾಲ್ಗೊಂಡಿದ್ದರು. ರೋವರ್ಸ್ ವಿಭಾಗಕ್ಕೆ ಶ್ರೀ ಗಣಪತಿ, ರೇಂಜರ್ಸ್ ವಿಭಾಗಕ್ಕೆ ಶ್ರೀಮತಿ ಮಂಜುಳಾ ರವರು ನಾಯಕತ್ವ ವಹಿಸಿದ್ದರು.

## ದಕ್ಷಿಣ ಕನ್ನಡ

ಏಪ್ರಿಲ್ 5 ರಂದು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎನ್.ಜಿ. ಮೋಹನ್‌ರವರ ಅಧ್ಯಕ್ಷತೆಯಲ್ಲಿ ರಾಜ್ಯ ಪುರಸ್ಕಾರದ ಪೂರ್ವಸಿದ್ಧಾ ಪರೀಕ್ಷಾ ಶಿಬಿರ ಉದ್ಘಾಟನೆಗೊಂಡಿತು. ಸ್ಕೌಟ್ಸ್-ಗೈಡ್ಸ್ ರಾಜ್ಯ ಪುರಸ್ಕಾರ ಪರೀಕ್ಷೆಯಲ್ಲಿ ಉತ್ತಮ ರೀತಿಯಲ್ಲಿ ಉತ್ತೀರ್ಣರಾಗುವಂತೆ ಶುಭ ಕೋರಿದರು. ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ರಾಮಶೇಷ ಶೆಟ್ಟಿ, ಜಿಲ್ಲಾ ಗೈಡ್ ಆಯುಕ್ತೆ ಶ್ರೀಮತಿ ಐರಿನ್ ಡಿ'ಕುನ್ಹ ಉಪಸ್ಥಿತರಿದ್ದರು.

ಸ್ಕೌಟ್ಸ್-ಗೈಡ್ಸ್ ವಿದ್ಯಾರ್ಥಿಗಳು ಬಾಲ್ಯದಿಂದಲೇ ನೆಲ, ಜಲ ಮತ್ತು ಬಗ್ಗೆ ಗಮನ ನೀಡಿ ಅದರ ಮಹತ್ವವನ್ನು ಸಮಾಜಕ್ಕೆ ತಿಳಿಸುವ ಗುರುತರ ಜವಾಬ್ದಾರಿಯನ್ನು ನಿರ್ವಹಿಸಬೇಕೆಂದು ಭಾರತ್ ಸ್ಕೌಟ್ಸ್-ಗೈಡ್ಸ್, ವಿಟ್ಲ ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಪ್ರಭಾಕರ ಶೆಟ್ಟಿ ದಂಬೆಕಾನ ಕಿವಿಮಾತು ಹೇಳಿದರು.

ಅವರು ವಿಟ್ಲದ ಮಾದರಿಶಾಲೆಯ ಶತಮಾನೋತ್ಸವ ಸಭಾಭವನದಲ್ಲಿ ಜರುಗಿದ ಭಾರತ್ ಸ್ಕೌಟ್ಸ್-ಗೈಡ್ಸ್‌ನ ವಾರ್ಷಿಕ ರ‍್ಯಾಲಿ ಸಭಾಧ್ಯಕ್ಷತೆಯನ್ನು ವಹಿಸಿ ಮಾತನಾಡಿದರು.ವಿಟ್ಲ ಲಯನ್ಸ್ ಕ್ಲಬ್‌ನ ಅಧ್ಯಕ್ಷರು ಹಾಗೂ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಸ್ಥಳೀಯ ಸಂಸ್ಥೆಯ ಉಪಾಧ್ಯಕ್ಷರು ಆದ ಶ್ರೀ ಸುದರ್ಶನ್ ಪಡಿಯಾರ್ ಕಾರ್ಯಕ್ರಮವನ್ನು ಉದ್ಘಾಟಿಸಿದರು.

ಸ್ಥಳೀಯ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀಮತಿ ಸುಮಿತ್ರಾ ಬಿ. ಶ್ರೀ ಅನಂತಕೃಷ್ಣ ಹೆಬ್ಬಾರ್ ನಿವೃತ್ತ ಪ್ರಾಂಶುಪಾಲರು. ವಿಠಲ ಪದವಿಪೂರ್ವ ಕಾಲೇಜು ವಿಟ್ಲ ಹಾಗೂ ಗೈಡ್ ಎ.ಡಿ.ಸಿ. ಶ್ರೀಮತಿ ಜೂಲಿಯಾನ ಮೇರಿಲೋಬೋ. ಐ.ಟಿ.ಐ. ಕಾಲೇಜಿನ ಪ್ರಾಚಾರ್ಯರಾದ ಶ್ರೀ ನವೀನ್ ಕುಮಾರ್ ಕೆ.ಎಸ್. ರವರು ಮುಖ್ಯ ಅತಿಥಿಗಳಾಗಿದ್ದರು. ಭಾರತ್ ಸ್ಕೌಟ್ಸ್-ಗೈಡ್ಸ್‌ನ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಹಾಗೂ ವಿಟ್ಲ ಮಾದರಿ ಶಾಲೆಯ ಪ್ರಭಾರ ಮುಖ್ಯೋಪಾಧ್ಯಾಯರಾದ ಶ್ರೀ ವಿಶ್ವನಾಥ ಬಿ. ಸ್ವಾಗತಿಸಿದರು. ಕಬ್ಸ್ ಶಿಕ್ಷಕಿ ಶ್ರೀಮತಿ ಜೆಸಿಂತ ಸೋಫಿಯಾ ಮಸ್ಕರೇನಸ್ ಎ.ಎಲ್.ಟಿ. ಧನ್ಯವಾದವಿತ್ತರು. ಮುರುವ ಮಾಣಿಲದ ಸಹಶಿಕ್ಷಕರಾದ ಶ್ರೀ ನರಸಿಂಹ ಭಟ್ ಕಾರ್ಯಕ್ರಮ ನಿರ್ವಹಿಸಿದರು.



* On 19th of March, Scouts and Guides of MGC high school, Bondel, in collaboration with Amala Bharatham team, sponsored by MRPL. Conducted Swatch Bharath Abhiyan in Bondel area. This programme was inaugurated by Mrs. Kavitha Sanil, Mayor, Mangalore City Corporation. She said about the importance of keeping our area clean and asked students to practice this in their day-to-day life. The President of this programme Mr. Krishnappa, environmentalist, Spoke about the saving of nature by cleaning and planting the plants. Sr. Matilda D' Souza, Headmistress, Mahatma Gandhi Centenary High School, encouraged the students. Scouter Sri Santhosh accompanied the Scouts and Guides.

## ದಾವಣಗೆರೆ




ಫೆಬ್ರವರಿ 22 ರಂದು ಬಿ.ಪಿ. ಜನ್ಮದಿನದ ಅಂಗವಾಗಿ ಅನ್‌ಮೋಲ್ ವಸತಿ ಶಾಲೆಯಲ್ಲಿ ರಕ್ತದಾನ ಶಿಬಿರವನ್ನು ಹಮ್ಮಿಕೊಳ್ಳಲಾಗಿತ್ತು. ಶಿರಮೋನಗೊಂಡನಹಳ್ಳಿ, ನಾಗನೂರು ಹಾಗೂ ಶಾಮನೂರಿನ ಗ್ರಾಮಸ್ಥರುಗಳನ್ನು ಒಂದುಗೂಡಿಸಿ ಅವರಿಗೆ ರಕ್ತದಾನದ ಅರಿವನ್ನು ಮೂಡಿಸಲಾಯಿತು. ಅನ್‌ಮೋಲ್ ವಸತಿ ಶಾಲೆಯ ಮುಖ್ಯಸ್ಥರಾದ ಶ್ರೀ ಸಿ.ಜಿ. ದಿನೇಶ್, ಉಪಪ್ರಾಂಶುಪಾಲರಾದ ಶ್ರೀ ಕೊಟ್ರೇಶ್ ಅವರು ಮತ್ತು ಬಾಪೂಜಿ ಓಪನ್ ಸ್ಕೌಟ್ ಟ್ರೂಪ್‌ನ ಲೀಡರ್ ಆದ ಶ್ರೀ ಟಿ.ಎಂ. ರವೀಂದ್ರಸ್ವಾಮಿ ಹಾಗೂ ಹೆಮೋಫಿಲಿಯಾ ಸೊಸೈಟಿಯ ವೈದ್ಯರು ಉಪಸ್ಥಿತರಿದ್ದರು. ಇದರಲ್ಲಿ 150ಕ್ಕೂ ಹೆಚ್ಚು ಗ್ರಾಮಸ್ಥರುಪಾಲ್ಗೊಂಡು ರಕ್ತದಾನವನ್ನು ಮಾಡಿದರು.



* ಫೆಬ್ರವರಿ 22 ರಂದು ಬಿ.ಪಿ.ಯವರ ಜನ್ಮದಿನವನ್ನು ಶ್ರೀ ತರಳಬಾಳು ಜಗದ್ಗುರು ವಸತಿ ಶಾಲೆ, ಅನುಭವ ಮಂಟಪ ಶಾಲೆಯಲ್ಲಿ ಹಮ್ಮಿಕೊಳ್ಳಲಾಯಿತು. ಈ ಕಾರ್ಯಕ್ರಮದಲ್ಲಿ ತರಳಬಾಳು ಶಾಲೆಯ ಸ್ಕೌಟ್ಸ್ ಮತ್ತು ಬಾಪೂಜಿ ಓಪನ್ ಸ್ಕೌಟ್ ಟ್ರೂಪ್‌ನ ಮಕ್ಕಳು ಒಂದಾಗಿ ಬಿ.ಪಿ. ಮತ್ತು ಲೇಡಿ ಬಿ.ಪಿ. ಯವರ ಜನ್ಮದಿನವನ್ನು ಆಚರಿಸಿದರು. ಈ ಸಂಭ್ರಮದಲ್ಲಿ ತರಳಬಾಳು ಶಾಲೆಯ ಪ್ರಾಂಶುಪಾಲರಾದ ಶ್ರೀ ಸೋಮಶೇಖರ್ ಕೆ.ಎಸ್. ಮತ್ತು ಸ್ಕೌಟ್ ಮಾಸ್ಟರ್ ಶ್ರೀ ಸಿದ್ದೇಶ್, ಸ್ಕೌಟ್ ತರಬೇತುದಾರರಾದ ಶ್ರೀ ಟಿ.ಎಂ. ರವೀಂದ್ರಸ್ವಾಮಿ, ದಾವಣಗೆರೆಯ ಜಿಲ್ಲಾ ಸಂಘಟಕರಾದ ಕು. ಪ್ರಿಯಾಂಕ ಹೆಚ್. ಎಂ. ರವರು ಉಪಸ್ಥಿತರಿದ್ದರು.

## ಹಾಸನ

ಮಾರ್ಚ್ 13 ರಂದು ಹಾಸನ ನಗರದ ಎನ್.ಡಿ.ಆರ್.ಕೆ. ಪ್ರಥಮ ದರ್ಜೆ ಕಾಲೇಜಿನಲ್ಲಿ ಎನ್.ಡಿ.ಆರ್.ಕೆ. ರೋವರ್ ಕ್ರ್ಯೂನ ವತಿಯಿಂದ ದೀಕ್ಷಾ ಸಮಾರಂಭವನ್ನು ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಕ್ರಮಕ್ಕೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಜಿಲ್ಲಾ ಸಂಸ್ಥೆ ವತಿಯಿಂದ ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಪ್ರಕಾಶ್ ಎಸ್. ಯಾಜಿರವರು ಮತ್ತು ಜಿಲ್ಲಾ ಕಾರ್ಯದರ್ಶಿ ಶ್ರೀ ಮುತ್ತೇಗೌಡ, ಜಿಲ್ಲಾ ಜಂಟಿ ಕಾರ್ಯದರ್ಶಿ ಶ್ರೀಮತಿ ಕಾಂಚನಮಾಲ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು.

* ಮಾರ್ಚ್ 8 ರಂದು ಹಾಸನದ "ಪಶು ವೈದ್ಯಕೀಯ ಕಾಲೇಜಿ"ನ ವತಿಯಿಂದ ಹಾಸನ ನಗರದ ಸಮೀಪದಲ್ಲಿನ ಕಬ್ಬತ್ತಿಯಲ್ಲಿ ಹಮ್ಮಿಕೊಂಡಿದ್ದ ಸಮುದಾಯ ಸೇವಾ ಶಿಬಿರದಲ್ಲಿ ಪ್ರಥಮ ಚಿಕಿತ್ಸೆ, ರೋಗಿಗಳನ್ನು ಸಾಗಿಸುವ ವಿವಿಧ ವಿಧಾನಗಳು, ಬ್ಯಾಂಡೇಜ್‌ಗಳನ್ನು ಹಾಕುವ ವಿಧಾನಗಳು, ಟೆಂಟ್ ಹಾಕುವ ವಿಧಾನದ ಬಗ್ಗೆ ಪ್ರಾಯೋಗಿಕವಾಗಿ ಪರಿಚಯಿಸಲಾಯ್ತು. ಈ ಕಾರ್ಯಕ್ರಮದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಜಿಲ್ಲಾ ಸಂಸ್ಥೆ, ಹಾಸನದಿಂದ ಸಂಪನ್ಮೂಲ ವ್ಯಕ್ತಿಗಳಾಗಿ ಶ್ರೀ ಎಮ್.ಎಸ್. ಪ್ರಕಾಶ್ ಎ.ಎಲ್.ಟಿ.(ಎಸ್.) ಮತ್ತು ಶ್ರೀ ಜೆ.ಎಲ್. ಲೀಲಾಮಹೇಶ್ವರ್ ಪ್ರೀ. ಎ.ಎಲ್.ಟಿ. (ಎಸ್.) ಶ್ರೀಮತಿ ಲೀಲಾವತಿ ಹೆಚ್.ಡಬ್ಲ್ಯೂ.ಬಿ.(ಜಿ.) ಭಾಗವಹಿಸಿದ್ದರು.

* ಮಾರ್ಚ್ 25 ರಂದು ಹಾಸನದ ಸಂತ ಫಿಲೋಮಿನಾ ಬಾಲಿಕಾ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಬುಲ್ ಬುಲ್ಸ್‌ಗಳನ್ನು ಗೈಡ್ ಕಂಪನಿಗೆ ಸೇರಿಸುವ ಬೀಳ್ಕೊಡುಗೆ ಸಮಾರಂಭವನ್ನು ಶಾಲೆಯ ಆವರಣದಲ್ಲಿ ಏರ್ಪಡಿಸಲಾಗಿತ್ತು.

ಮುಖ್ಯ ಅತಿಥಿಗಳಾಗಿ ಶ್ರೀಮತಿ ಜಯಾ ರಮೇಶ್, ಜಿಲ್ಲಾ ಆಯುಕ್ತರು (ಗೈಡ್ಸ್) ಶ್ರೀಮತಿ ಕಾಂಚನ ಮಾಲಾ, ಜಿಲ್ಲಾ ಜಂಟಿ ಕಾರ್ಯದರ್ಶಿ, ಶ್ರೀ ಎಲ್.ಟಿ. ಲೋಕೇಶ್, ರಾಜ್ಯ ತರಬೇತಿ ಆಯುಕ್ತರು (ಸ್ಕೌಟ್ಸ್) ಮತ್ತು ಸಂತ ಫಿಲೋಮಿನಾ ಕಾಲೇಜಿನ ಪ್ರಾಂಶುಪಾಲರಾದ ಸಿಸ್ಟರ್ ಜಾಸ್ಮಿನ್, ಹಿ.ಪ್ರಾ. ಶಾಲಾ ಮುಖ್ಯ ಶಿಕ್ಷಕಿಯಾದ ಸಿಸ್ಟರ್ ಅಮೂಲ್ಯ, ಸಿಸ್ಟರ್ ಐರಿನ್ ನರೋನ, ಸಿಸ್ಟರ್ ಹಿಲ್ಡಾರವರು ಸಮಾರಂಭದಲ್ಲಿ ಉಪಸ್ಥಿತರಿದ್ದು, ಬುಲ್-ಬುಲ್‌ಗಳ ಚಟುವಟಿಕೆಗಳನ್ನು ವೀಕ್ಷಿಸಿ ಪ್ರಶಂಸೆ ವ್ಯಕ್ತಪಡಿಸಿದರು.

ಸಮಾರಂಭದ ಅಂಗವಾಗಿ ವಿವಿಧ ಪರೀಕ್ಷೆಗಳನ್ನು ಬುಲ್-ಬುಲ್ಸ್‌ಗಳಿಗಾಗಿ ಏರ್ಪಡಿಸಲಾಗಿತ್ತು ಮತ್ತು ಕೋಮಲ ಪಂಖ್, ರಜತ ಪಂಖ್, ಸುವರ್ಣ ಪಂಖ್, ಹೀರಖ್ ಪಂಖ್ ಪರೀಕ್ಷೆಗಳ ಪಠ್ಯದ ವಿಷಯ ಮತ್ತು ಪರೀಕ್ಷೆಗಳನ್ನು ಯಾವ ರೀತಿ ನಡೆಸಬೇಕೆನ್ನುವ ಕುರಿತು ಶಾಲೆಯ ಫ್ಲಾಕ್ ಲೀಡರ್ ಆದ ಶ್ರೀಮತಿ ಸೋಫಿಯಾ ಫರ್ನಾಂಡೀಸ್‌ರವರು ವೀಡಿಯೋ ಚಿತ್ರೀಕರಣ ಮಾಡಿಸಿ ಮುಂದೆ ದಳ ನಡೆಸುವ ಫ್ಲಾಕ್ ಲೀಡರ್ಸ್‌ಗಳಿಗೆ ಇದು ಅನುಕೂಲವಾಗಲಿದೆ ಎಂದು ತಿಳಿಸಿದರು.

ಶ್ರೀಮತಿ ಜಯಾ ರಮೇಶ್, ಜಿಲ್ಲಾ ಆಯುಕ್ತರು(ಗೈಡ್ಸ್) ರವರು ಇಂತಹ ಕಾರ್ಯಕ್ರಮಗಳು ಇತರ ಬುಲ್ -ಬುಲ್ಸ್ ದಳಗಳಿಗೆ ಮಾದರಿಯಾಗಿದೆ ಎಂದು ತಿಳಿಸಿದ ಸಿಸ್ಟರ್ ಜಸ್ಮಿನ್ ರವರು ಸಂತ ಫಿಲೊಮಿನಾ ಶಾಲೆಯಲ್ಲಿ ಗೈಡ್ಸ್-ಬುಲ್‌ಬುಲ್ಸ್ ಚಟುವಟಿಕೆಗಳು ಬಹಳ ಹಿಂದಿನಿಂದಲೂ ನಡೆಸುತ್ತಾ ಬಂದಿದ್ದು, ಹಲವು ಬುಲ್-ಬುಲ್ಸ್ ಮತ್ತು ಗೈಡ್ಸ್‌ಗಳು ರಾಜ್ಯ ಪುರಸ್ಕಾರ ಮತ್ತು ರಾಷ್ಟ್ರಪತಿ ಪುರಸ್ಕಾರ ಪಡೆದಿದ್ದಾರೆ ಎಂದು ಬುಲ್-ಬುಲ್ಸ್, ಗೈಡ್ಸ್‌ಗಳ ಚಟುವಟಿಕೆಗಳನ್ನು ಕುರಿತು ಪ್ರಶಂಸಿಸಿದರು.

ಇದೇ ಸಂದರ್ಭದಲ್ಲಿ ಮಕ್ಕಳಿಗೆ ಹೀರಖ್ ಪಂಖ್ ಪ್ರಶಸ್ತಿಗಳನ್ನು ವಿತರಿಸಲಾಯಿತು. ಕಾರ್ಯಕ್ರಮದ ಅಂಗವಾಗಿ, ಬುಲ್-ಬುಲ್ ರಿಂಗ್, ಬುಲ್-ಬುಲ್ ನಾದ, ಗ್ರೀಬಿಂಗ್, ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಮತ್ತು ತಾರಾಸ್ಟೋರಿಯ ಹಲವು ಸನ್ನಿವೇಶಗಳನ್ನು ಬುಲ್-ಬುಲ್ಸ್‌ಗಳು ಪ್ರದರ್ಶಿಸಿದರು.



## ಹಾವೇರಿ

ತಾಲ್ಲೂಕು ಮಟ್ಟದ 27ನೇ ರ್‍ಯಾಲಿಯನ್ನು ಹೆಚ್.ಪಿ.ಎಸ್. ಹೊಸಳ್ಳಿ, ಸವಣೂರು ತಾಲ್ಲೂಕು ಹಾವೇರಿ ಜಿಲ್ಲೆ ಇಲ್ಲಿ ಹಮ್ಮಿಕೊಳ್ಳಲಾಗಿತ್ತು. 187 ಸ್ಕೌಟ್ಸ್ 120 ಗೈಡ್ಸ್, 26 ಸ್ಕೌಟರ್ಸ್–ಗೈಡ್ ಕ್ಯಾಪ್ಟನ್ನರು ಭಾಗವಹಿಸಿದ್ದರು.

ಕಾರ್ಯಕ್ರಮದ ಸಾನ್ನಿಧ್ಯವನ್ನು ಹತ್ತಿಮತ್ತೂರು ಗ್ರಾಮದ ಪೂಜ್ಯ ಪ್ರಣವ ಸ್ವರೂಪಿ ನಿರಂಜನ ಸ್ವಾಮೀಜಿಯವರು ವಹಿಸಿದ್ದು. ತಾ. ಸಂಸ್ಥೆಯ ಅಧ್ಯಕ್ಷರಾದ ಶ್ರೀ ನಂದೀಶ್ ಹಾವಣಗಿ, ಪದಾಧಿಕಾರಿಗಳಾದ ಶ್ರೀ ವಿರೂಪಾಕ್ಷಪ್ಪ ಸಿಂಧೂರ, ಶ್ರೀಮಂಜುನಾಥ ಗಾಣಿಗೇರ, ಶ್ರೀಮತಿ ರಾಜೇಶ್ವರಿ ಬಾಶೆಟ್ಟಿ ಹಾಗೂ ಶಾಲೆಯ ಎಸ್.ಡಿ.ಎಂ.ಸಿ. ಅಧ್ಯಕ್ಷರು ಸದಸ್ಯ ಗ್ರಾ. ಪಂ. ಅಧ್ಯಕ್ಷರು, ಸದಸ್ಯರು ಹಾಗೂ ಶ್ರೀ ಎಸ್.ಕೆ. ದಿವಾಕರಮೂರ್ತಿ ಕಾರ್ಯದರ್ಶಿಗಳು ಉಪಸ್ಥಿತರಿದ್ದರು. ಶ್ರೀ ವಿ.ಬಿ. ದೊಂಕಡೆ, ಶಿಕ್ಷಕರು ವಂದಿಸಿದರು.

## ಬಾಗಲಕೋಟೆ



ಏಪ್ರಿಲ್ 1 ರಂದು ಮುಧೋಳದಲ್ಲಿ ಬಿ.ವ್ಹಿ.ವ್ಹಿ. ಸಂಘದ ಶ್ರೀ ಎಸ್.ಆರ್. ಕಂಠಿ ಕಲಾ, ವಾಣಿಜ್ಯ, ವಿಜ್ಞಾನ ಹಾಗೂ ಬಿ.ಸಿ.ಎ. ಮಹಾವಿದ್ಯಾಲಯದ ಸಂಗೊಳ್ಳಿರಾಯಣ್ಣ ರೋವರ್ ಘಟಕದ ವತಿಯಿಂದ "ಸೈಕಲ್ ಅಭಿಯಾನ" ಹಮ್ಮಿಕೊಳ್ಳಲಾಗಿತ್ತು. ಪ್ರಾಚಾರ್ಯರಾದ ಪ್ರೊ. ಎನ್. ಆರ್. ಹಳ್ಳೂರ ಚಾಲನೆ ನೀಡಿದರು. ಅವರೊಂದಿಗೆ ರೋವರ್ ಸ್ಕೌಟ್ಸ್ ಲೀಡರ್ ಪ್ರೊ. ಎಂ.ಕೆ. ಗವಿಮಠ ಉಪಸ್ಥಿತರಿದ್ದರು. ಅದರಲ್ಲಿ 12 ರೋವರ್‌ಗಳು ಭಾಗವಹಿಸಿದ್ದರು. ಸುಮಾರು 250 ಕಿ.ಮೀ.ಗಳ ವರೆಗೆ ಈ ಅಭಿಯಾನ ನಡೆಯಿತು. ಮುಧೋಳದಿಂದ ವಾಚಕನೂರ ಮಾರ್ಗವಾಗಿ ಕದಾಲಗಿ, ಗದ್ದನಕೇರಿ ಕ್ರಾಸ್, ಬಾಗಲಕೋಟ ಜಿಲ್ಲಾ ಸಂಸ್ಥೆಗೆ ಭೇಟಿ ನೀಡಿ ಮರಳಿ ಬೀಳಗಿಕ್ರಾಸ್, ಚಿಕ್ಕಸಂಗದಲ್ಲಿ ವಸತಿ ಮಾಡಿ ಅಲ್ಲಿಂದ ಮರಳಿ ಬೀಳಗಿ, ತೆಗ್ಗಿ, ಸಿದ್ದಾಪೂರ, ಮಂಟೂರ ಮಾರ್ಗವಾಗಿ ಮುಧೋಳಕ್ಕೆ ಸೋಮವಾರ ಏಪ್ರಿಲ್ 3 ರಂದು ಮರಳಿದ್ದಾರೆ.

ಈ ಮಾರ್ಗ ಮಧ್ಯದಲ್ಲಿ ಬರುವ ಎಲ್ಲ ಗ್ರಾಮ ಪಂಚಾಯತಿ/ಪಟ್ಟಣ ಪಂಚಾಯತಿಗಳಿಗೆ ಭೇಟಿ ನೀಡಿ ನೆಲಜಲ ರಕ್ಷಣೆ ನಮ್ಮೆಲ್ಲರ ಹೊಣೆ, ಸ್ವಚ್ಛ ಭಾರತ ಅಭಿಯಾನ, ಹಸಿರೇ ಉಸಿರು ಮತ್ತು ಊರಿಗೊಂದು ಶಾಲೆ ಮನೆಗೊಂದು ಶೌಚಾಲಯ ಎಂಬ ವಿವಿಧ ಸಂದೇಶಗಳನ್ನು ತಿಳಿ ಹೇಳುತ್ತಾರೆ.

## ಕೋಲಾರ

* ಮಾರ್ಚ್ 22 ರಂದು ಕೋಲಾರ ತಾಲ್ಲೂಕಿನ ವೇಮಗಲ್ ಹೋಬಳಿ ಕೇಂದ್ರದಲ್ಲಿ ವಿಶ್ವ ಜಲದಿನಾಚರಣೆ ಪ್ರಯುಕ್ತ ಸಾರ್ವಜನಿಕರಿಗೆ ಜಲ ಜಾಗೃತಿ ಸಲುವಾಗಿ ಬೀದಿ ನಾಟಕ, ಘೋಷಣೆಗಳು ಮತ್ತು ಹಾಡುಗಳ ಮೂಲಕ ಜಿಲ್ಲಾ ಯುವ ಸಮಿತಿಯ ಸದಸ್ಯರುಗಳು ಗ್ರಾಮದ ಪ್ರಮುಖ ಬೀದಿಗಳಲ್ಲಿ ಜಾಗೃತಿ ಮೂಡಿಸಿದರು.

* ಮಾರ್ಚ್ 28 ರಂದು ಜಿಲ್ಲೆಯ ವಿವಿಧ ಕಾಲೇಜುಗಳ ರೋವರ್ಸ್ ಮತ್ತು ರೇಂಜರ್ಸ್‌ಗಳು ಕೋಲಾರ ನಗರದ ಸೋಮೇಶ್ವರ ದೇವಾಲಯದ ಆವರಣವನ್ನು ಸ್ವಚ್ಛಗೊಳಿಸಿ ಸಾರ್ವಜನಿಕರ ಪ್ರಶಂಸೆಗೆ ಪಾತ್ರರಾದರು. ಈ ಶಿಬಿರದ ಆಯೋಜಕರಾದ ಶ್ರೀ ಮಂಜುನಾಥ್ ರವರು ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಉತ್ತಮ ಯೋಜನೆಗಳನ್ನು ಹಮ್ಮಿಕೊಂಡಿದ್ದು ಈ ಸಂಸ್ಥೆಗೆ ನನ್ನ ಸಹಕಾರ ಸದಾ ಸಿಗಲಿದೆ ಎಂದರು, ಅಂದಿನ ಶ್ರಮದಾನದ ವಿದ್ಯಾರ್ಥಿಗಳಿಗೆ ಉತ್ತಮವಾದ ಊಟದ ವ್ಯವಸ್ಥೆಯನ್ನು ಮಾಡಿದರು.



* ಏಪ್ರಿಲ್ 6 ರಿಂದ 14 ರ ವರೆಗೆ ಕೋಲಾರ ಸ್ಥಳೀಯ ಸಂಸ್ಥೆಯ 5ನೇ ವರ್ಷದ ಬೇಸಿಗೆ ಶಿಬಿರವನ್ನು ನಡೆಸಲಾಯಿತು. ಈ ಶಿಬಿರದಲ್ಲಿ ಮಕ್ಕಳಿಗೆ ಚಿತ್ರಕಲೆ, ಪೇಪರ್ ಕಟಿಂಗ್, ಚಾಕ್‌ಪೀಸ್ ತಯಾರಿಕೆ, ಮೇಣದ ಬತ್ತಿ ತಯಾರಿಕೆ, ಶ್ಯಾಂಪೂ ತಯಾರಿಕೆ ಮುಂತಾದ ಚಟುವಟಿಕೆಗಳನ್ನು ಮಾಡಿಸಲಾಯಿತು.ಮಕ್ಕಳಿಗೆ ಚಿತ್ರಕಲೆ, ಆಶು-ಭಾಷಣ, ಸ್ಥಳದಲ್ಲಿಯೇ ಕವನ ರಚನೆ, ಕಥೆ ಹೇಳುವುದು, ಜಾನಪದ ಗೀತೆ, ಆಟಗಳು, ಸ್ಪರ್ಧೆಗಳನ್ನು ಕೈಗೊಂಡು ವಿಜೇತರಿಗೆ ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಗೋಪಾಲ ರೆಡ್ಡಿ ರವರು ರೋಟರಿ ಶಬ್ದಕೋಶಗಳನ್ನು ನೀಡಿ ಅಭಿನಂದಿಸಿದರು.

* ಏಪ್ರಿಲ್ 10 ರಂದು ಕೋಲಾರ ತಾಲ್ಲೂಕಿನ ಕೆಂಬೋಡಿ ಗ್ರಾಮದಲ್ಲಿ 2ನೇ ತಿಂಗಳ ಹುಣ್ಣಿಮೆ ಪ್ರಯುಕ್ತ ಜಿಲ್ಲಾ ಯುವ ಸಮಿತಿಯ ಪದಾಧಿಕಾರಿಗಳಿಂದ ಗೀತ್ ಭಾರತಿ ಕಾರ್ಯಕ್ರಮದ ಸಲುವಾಗಿ ಜನರಿಗೆ ಸಂಸ್ಥೆಯ ಹಾಡುಗಳು, ಚಟುವಟಿಕೆಗಳು, ಸರ್ಕಾರದ ವಿವಿಧ ಯೋಜನೆಗಳ ಬಗ್ಗೆ ಜನರಿಗೆ ಅರಿವು ಮೂಡಿಸಲಾಯಿತು. ಈ ಕಾರ್ಯಕ್ರಮವನ್ನು ಗ್ರಾಮದ ಹಿರಿಯರು ಹಾಗೂ ಗಾಂಧೀವಾದಿಗಳಾದ ಶ್ರೀ ನಾರಾಯಣಗೌಡರು ತಮಟೆ ಬಾರಿಸುವ ಮೂಲಕ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು.

ಏಪ್ರಿಲ್ 14 ರಂದು ಜಿಲ್ಲಾ ಸಂಸ್ಥೆಯ ಆಶ್ರಯದಲ್ಲಿ ಡಾ॥ ಬಿ.ಆರ್. ಅಂಬೇಡ್ಕರ್ ರವರ ಜನ್ಮದಿನಾಚರಣೆಯನ್ನು ಆಚರಿಸಲಾಯಿತು. ಶಾಲಾ ಮಕ್ಕಳಿಗೆ ಭಾಷಣ ಸ್ಪರ್ಧೆಯಲ್ಲಿ ಎಸ್.ಆರ್.ವಿ. ಶಾಲೆಯ ಕು॥ ಮೌನಿಕ. ವಿಧ್ಯಾಜ್ಯೋತಿ ಶಾಲೆಯ ಕುಮಾರಿ ಕೃತ್ತಿಕ, ಹುತ್ತೂರು ಶಾಲೆಯ ಬಾಲಕ ಚೇತನ್ ಬಹುಮಾನ ಪಡೆದರು.

ಏಪ್ರಿಲ್ 17 ರಿಂದ 19 ರ ವರೆಗೆ ಕೋಲಾರ ತಾಲ್ಲೂಕಿನ ಕಾಡಹಳ್ಳಿ ಗ್ರಾಮದ ಹಿರಿಯ ಪ್ರಾಥಮಿಕ ಶಾಲಾ ಆವರಣದಲ್ಲಿ ರಾಜ್ಯಪುರಸ್ಕಾರ ಪೂರ್ವಸಿದ್ಧತಾ ಶಿಬಿರವನ್ನು ನಡೆಸಲಾಯಿತು.

ಗ್ರಾಮದ ಯುವ ಮುಖಂಡರು ಹಾಗೂ ಸಾಮಾಜಿಕ ಕಾರ್ಯಕರ್ತರಾದ ಶ್ರೀ ಶಶಿಕುಮಾರ್ ರವರು ಮತ್ತು ಶಾಲೆಯ ಅಧ್ಯಕ್ಷರಾದ ಶ್ರೀ ಶಿವಣ್ಣರವರು ಅತಿಥಿಗಳಾಗಿ ಭಾಗವಹಿಸಿದ್ದರು. ಶಿಬಿರ ನಾಯಕಿಯಾಗಿ ಶ್ರೀಮತಿ ಉಮಾದೇವಿ, ನಾಯಕರಾಗಿ ಶ್ರೀ ನಾರಾಯಣಸ್ವಾಮಿ, ಸಹ ನಾಯಕರಾಗಿ ಶ್ರೀ ನಾರಾಯಣಸ್ವಾಮಿ, ಶ್ರೀ ಸಂತೋಷ್, ಶ್ರೀಮತಿ ರೇಷ್ಮಾ, ಶ್ರೀ ಆಂಥೋನಿ, ಧನಂಜಯ್, ಶ್ರೀ ಚೇತ್ ಬಾಬು ವಿ. ರವರುಗಳು ಕಾರ್ಯನಿರ್ವಹಿಸಿದರು.

## ರಾಯಚೂರು

ಮಾರ್ಚ್ 22 ರಂದು ರಾಯಚೂರು ಜಿಲ್ಲಾ ಸ್ಕೌಟ್ ಭವನದಲ್ಲಿ "ವಿಶ್ವ ಜಲ ದಿನಾಚರಣೆ" ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡಿದ ಶ್ರೀ ಕೈಸರ್ ರಜಾಖ ನಿವೃತ್ತ ಅಪರ ಜಿಲ್ಲಾಧಿಕಾರಿಗಳು, ರಾಯಚೂರು ಇವರು ನೀರು ಪ್ರತಿಯೊಂದು ಪ್ರಾಣಿ-ಪಕ್ಷಿಗಳಿಗೆ ಅಗತ್ಯವಾಗಿರುವ ವಸ್ತುವಾಗಿದೆ ಇದನ್ನು ಸರಿಯಾದ ರೀತಿಯಲ್ಲಿ ಬಳಕೆ ಮಾಡುವುದು ನಮ್ಮೆಲ್ಲರ ಕರ್ತವ್ಯವಾಗಿದೆ ಎಂದರು.

ಡಾ॥ ಶಿವಯ್ಯ ಹಿರೇಮಠ, ರೋವರ್ ಸ್ಕೌಟ್ ಲೀಡರ್ ಮಾತನಾಡಿ, ಭಾರತದ ಆರ್ಥಿಕತೆ ಕೃಷಿಯನ್ನೇ ದೊಡ್ಡದಾಗಿ ಅವಲಂಬಿಸಿದೆ. ಆದರೆ ನೀರಿನ ಕೊರತೆ ಹಾಗೂ ಪದೇಪದೇ ರಾಷ್ಟ್ರವನ್ನು ಕಾಡುತ್ತಿರುವ ಬರದಿಂದ ಆರ್ಥಿಕ ಪ್ರಗತಿ ಮೇಲಾಗುವ ಪರಿಣಾಮ ದೊಡ್ಡದು. ಇಂತಹ ಸಂದರ್ಭದಲ್ಲಿ ನೀರಿನ ಪೋಲು ತಡೆಯುವ ಬಗ್ಗೆ ವಿಶೇಷ ಗಮನ ಹರಿಸುವುದು ಅಗತ್ಯವಾಗಿದೆ ಎಂದರು.



ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಕೆ. ತಿಮ್ಮಯ್ಯ ಜಿಲ್ಲಾ ಮುಖ್ಯ ಆಯುಕ್ತರು ವಹಿಸಿ ಮಾತನಾಡುತ್ತ, ಜೀವ ಪ್ರತಿಯೊಂದು ಜೀವಿಗೂ ಅತ್ಯಾವಶ್ಯಕವಾಗಿದ್ದು ಇದನ್ನು ಸಂರಕ್ಷಣೆ ಮಾಡುವುದು ನಮ್ಮೆಲ್ಲರ ಜವಾಬ್ದಾರಿಯಾಗಿದೆ ಎಂದು ಹೇಳಿದರು. ಶ್ರೀಮತಿ ಅಜೀಜಾ ಸುಲ್ತಾನ ಜಿಲ್ಲಾ ಆಯುಕ್ತರು(ಗೈ) ಇವರು ಪ್ರಾಸ್ತಾವಿಕವಾಗಿ ಮಾತನಾಡಿದರು. ಈ ಸಂದರ್ಭದಲ್ಲಿ ಶ್ರೀ ಹೆಚ್. ಹನುಮಂತಪ್ಪ ಜಿಲ್ಲಾ ಕಾರ್ಯದರ್ಶಿಗಳು, ಶ್ರೀಮತಿ ಕೆ. ಆಲಿಯಾ ಖಾನಂ, ಶ್ರೀ ರಾವುತರಾವ್ ಬರೂರ, ಶ್ರೀ ಆರ್.ಹೆಚ್. ಸಾಗರ, ಗಂಗಾಧರಯ್ಯ ಹಿರೇಮಠ ಹಾಗೂ ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳು ಭಾಗವಹಿಸಿದ್ದರು.

ಏಪ್ರಿಲ್ ತಿಂಗಳಿನಿಂದ ಡಿಸೆಂಬರ್ ವರೆಗೆ ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳು ಗ್ರಾಮಗಳಲ್ಲಿ ಸಂಚರಿಸಿ, ನೀರಿನ ಬಳಕೆ, ಸ್ವಚ್ಛತೆ, ಅಂತರ್ಜಲ ಹೆಚ್ಚಿಸುವುದು, ಶುದ್ಧ ನೀರಿನ ಬಳಕೆ ನೀರು ಬಳಸುವ ವಿಧಾನಗಳನ್ನು ಪ್ರತಿಯೊಬ್ಬರಿಗೆ ತಿಳಿಸಲು ಜಿಲ್ಲಾ ಸಂಸ್ಥೆಯು ಕಾರ್ಯ ಯೋಜನೆಗಳನ್ನು ಹಾಕಿಕೊಂಡಿದೆ. "ನೀರು ಉಳಿಸಿ, ಕರ್ನಾಟಕ ಉಳಿಸಿ" ಈ ಘೋಷವಾಕ್ಯವನ್ನು ಆಧರಿಸಿ ಸಮಾಜ ಸೇವೆಯಲ್ಲಿ ತೊಡಗಲಿದೆ.

## ಕೊಪ್ಪಳ

ಫೆಬ್ರವರಿ 8 ರಂದು ಜಿಲ್ಲಾ ಮಟ್ಟದ ತೃತೀಯ ಸೋಪಾನ ಪರೀಕ್ಷಾ ಶಿಬಿರವನ್ನು ಎಕ್ಸ್‌ಲೆಂಟ್ ಪಬ್ಲಿಕ್ ಶಾಲೆ, ಗದಗ ರಸ್ತೆ, ಕೊಪ್ಪಳದಲ್ಲಿ ಹಮ್ಮಿಕೊಳ್ಳಲಾಗಿತ್ತು. ಈ ಶಿಬಿರದಲ್ಲಿ ಜಿಲ್ಲೆಯ ಎಲ್ಲಾ ತಾಲೂಕಿನಿಂದ ಒಟ್ಟು 500 ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಭಾಗವಹಿಸಿದ್ದರು. ಈ ಶಿಬಿರದ ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಜಿಲ್ಲಾ ಆಯುಕ್ತರಾದ ಶ್ರೀ ಹೆಚ್.ಎಂ. ಸಿದ್ಧರಾಮಸ್ವಾಮಿಯವರು ವಹಿಸಿದ್ದರು. ಅಧ್ಯಕ್ಷತೆಯ ಭಾಷಣದಲ್ಲಿ ಮುಂದಿನ ವರ್ಷದಲ್ಲಿ ನೀವೆಲ್ಲರೂ ಗೌರ್ನರ್ ಅವಾರ್ಡ್ ಪರೀಕ್ಷೆಯಲ್ಲಿ ಭಾಗವಹಿಸಬೇಕೆಂದು ಶಿಬಿರಾರ್ಥಿಗಳಿಗೆ ತಿಳಿಸಿದರು. ಜಿಲ್ಲಾ ಸಹಾಯಕ ಆಯುಕ್ತರಾದ ಶ್ರೀ ಅರುಣಾವಸ್ತ್ರದ್ ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ಎ. ಎರ್ರಣ್ಣ ಉಪಸ್ಥಿತರಿದ್ದರು.



ಕಾರ್ಯಕ್ರಮದ ಮುಖ್ಯ ಅತಿಥಿಗಳಾಗಿ ಕರ್ನಾಟಕ ರಾಜ್ಯ ಪ್ರಾಥಮಿಕ ಶಾಲೆ ಶಿಕ್ಷಕರ ಸಂಘದ ಗಂಗಾವತಿ ತಾಲೂಕಾ ಅಧ್ಯಕ್ಷರಾದ ಶ್ರೀ ಉಮೇಶ್ ಮೈಲಾರ್ ರವರು ಭಾಗವಹಿಸಿ ಮಾತನಾಡಿ, ಮುಂದಿನ ವರ್ಷದಲ್ಲಿ ನಮ್ಮ ಭಾಗದ ಕನಕಗಿರಿಯಲ್ಲಿ ಜಿಲ್ಲಾ ಮಟ್ಟದ ಮೇಳವನ್ನು ನಡೆಸಲು ಎಲ್ಲಾ ರೀತಿಯ ಸಹಾಯ ಮತ್ತು ಸಹಕಾರವನ್ನು ನಮ್ಮ ಸಂಘದಿಂದ ನೀಡಲಾಗುವುದೆಂದರು.

ಈ ಶಿಬಿರದ ಮುಖ್ಯ ಉಸ್ತುವಾರಿಯನ್ನು ಜಿಲ್ಲಾ ಕಾರ್ಯದರ್ಶಿಯಾದ ಶ್ರೀ ಮಲ್ಲಿಕಾರ್ಜುನ ಚೌಕಿಮಠ್ ರವರು ವಹಿಸಿಕೊಂಡಿದ್ದರು. ಜಿಲ್ಲಾ ಸಂಘಟಕರಾದ ಶ್ರೀಮತಿ ಮಲ್ಲೇಶ್ವರಿ ಜುಜಾರೆ ಕಾರ್ಯಕ್ರಮ ಸಂಘಟಿಸಿದ್ದರು.

* ಫೆಬ್ರವರಿ 22 ರಂದು ಶಾರದಾ ಪ್ರೌಢಶಾಲೆ, ಕೊಪ್ಪಳದಲ್ಲಿ ಸ್ಥಾಪಕರ ದಿನಾಚರಣೆ ಪ್ರಯುಕ್ತ ಬೇಡನ್ ಪೋವೆಲ್ ಮತ್ತು ಲೇಡಿ ಬೇಡನ್ ಪಾವೆಲ್ ರವರ ಬಾವಚಿತ್ರಕ್ಕೆ ಜಿಲ್ಲಾ ಕಾರ್ಯದರ್ಶಿಯಾದ ಶ್ರೀ ಮಲ್ಲಿಕಾರ್ಜುನ ಚೌಕಿಮಠ್ ರವರು ಹೂಮಾಲೆಯನ್ನು ಅರ್ಪಿಸಿದರು ನಂತರ ಸರ್ವಧರ್ಮ ಪ್ರಾರ್ಥನೆಯನ್ನು ನಡೆಸಲಾಯಿತು. ಜಿಲ್ಲಾ ಸಂಘಟಕರಾದ ಶ್ರೀಮತಿ ಮಲ್ಲೇಶ್ವರಿಯವರು ಬಿ.ಪಿ.ಯವರ ಚರಿತ್ರೆಯನ್ನು ತಿಳಿಸಿದರು.

ನಂತರ ಕೊಪ್ಪಳ ತಾಲೂಕಿನ ತಾಲೂಕಾ ಮೇಳವನ್ನು ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ರಾಘವೇಂದ್ರ ಪಾನಿಗಂಟಿ ಮತ್ತು ಶ್ರೀಮತಿ ಸಂಧ್ಯಾ ಮಾದಿನೂರು, ಜಿಲ್ಲಾ ಆಯುಕ್ತರು (ಗೈಡ್) ಇವರು ಶಾರದ ಶಾಲೆಯಲ್ಲಿ ಹಸಿರು ನಿಶಾನೆ ತೋರಿ ಪ್ರಭಾತ ಪೇರಿಗೆ ಚಾಲನೆಕೊಟ್ಟರು.



ನಂತರ ಸ್ಕೌಟ್ಸ್-ಗೈಡ್ಸ್‌ಗಳಿಗೆ ಸ್ಕಿಲೋರಾಮ, ಧ್ವಜ ನಿರ್ಮಾಣ, ರಂಗೋಲಿ, ಅಡುಗೆ, ಪೇಪರ್ ಕಟಿಂಗ್, ರಸಪ್ರಶ್ನೆ, ದೇಶಭಕ್ತಿ ಗೀತೆ, ಮೆಹಂದಿ, ಡ್ರಾಯಿಂಗ್ ಮುಂತಾದ ಸ್ಪರ್ಧೆಗಳನ್ನು ನಡೆಸಲಾಯಿತು. ಊಟದ ನಂತರ ಜಾನಪದ ನೃತ್ಯ ಕಾರ್ಯಕ್ರಮವನ್ನು ನಡೆಸಲಾಯಿತು. ಸಂಜೆ 4 ಗಂಟಗೆ ಶ್ರೀ ಹೆಚ್.ಎಂ. ಸಿದ್ಧರಾಮಸ್ವಾಮಿ ಅಧ್ಯಕ್ಷತೆಯಲ್ಲಿ ರ‍್ಯಾಲಿಯ ಸಮಾರೋಪ ಸಮಾರಂಭವನ್ನು ನಡೆಸಲಾಯಿತು. ಮೇಳದ ನಾಯಕರಾದ ಶ್ರೀ ಮೋಹನ್ ಇವರು ಮೇಳದ ವರದಿಯನ್ನು ನೀಡಿದರು. ಸ್ಕೌಟ್ಸ್-ಗೈಡ್ಸ್ ಗಳಿಗೆ ಪ್ರಶಸ್ತಿ ಪತ್ರ ಮತ್ರ ಮೆಡಲ್‌ಗಳನ್ನು ಮುಖ್ಯ ಅತಿಥಿಗಳಿಂದ ವಿತರಿಸಲಾಯಿತು.

ಈ ಮೇಳದಲ್ಲಿ ಶ್ರೀ ಶಿವಪ್ಪ ಜೋಗಿ ಪ್ರಧಾನ ಕಾರ್ಯದರ್ಶಿಗಳು, ಕೊಪ್ಪಳ ಜಿಲ್ಲಾ ಸರ್ಕಾರಿ ನೌಕರರ ಸಂಘ, ಕೊಪ್ಪಳ ಜಿಲ್ಲೆ. ಶ್ರೀ ಸುರೇಶ್ ಅರಕೇರಿ, ಅಧ್ಯಕ್ಷರು, ತಾಲ್ಲೂಕು ಶಿಕ್ಷಕರ ಸಂಘ, ಕೊಪ್ಪಳ ತಾಲೂಕು ಶಿಕ್ಷಕರ ಸಂಘ, ಶ್ರೀ ಬೀರಪ್ಪ ಅಂಗಡಿ, ಅಧ್ಯಕ್ಷರು, ಅಂಗವಿಕಲ ರಾಜ್ಯ ನೌಕರರ ಸಂಘ, ಬೆಂಗಳೂರು ಹಾಗೂ ಅಧ್ಯಕ್ಷರು ಎನ್.ಪಿ.ಎಸ್. ರಾಜ್ಯ ನೌಕರರ ಸಂಘ, ಬೆಂಗಳುರು ಭಾಗವಹಿಸಿದ್ದರು.



* ಮಾರ್ಚಿ 14 ರಿಂದ 16 ರ ವರೆಗೆ ನಿಪುಣ್ ರೋವರ್ ಮತ್ತು ನಿಪುಣ್ ರೇಂಜರ್ ಪರೀಕ್ಷಾ ಶಿಬಿರವನ್ನು ಪಂಪ ಸರೋವರದಲ್ಲಿ ಹಮ್ಮಿಕೊಳ್ಳಲಾಗಿತ್ತು. ಈ ಶಿಬಿರದಲ್ಲಿ 63 ರೋವರ್ಸ್ ಮತ್ತು 20 ರೇಂಜರ್ಸ್ ಭಾಗವಹಿಸಿದ್ದರು. ರೋವರ್ ವಿಭಾಗದ ನಾಯಕರಾಗಿ ಶ್ರೀ ಎನ್.ಡಿ. ತಮ್ಮಣ್ಣನವರ್ ಎಎಲ್‌ಟಿ(ರೋ)), ರೇಂಜರ್ ವಿಭಾಗದ ನಾಯಕಿಯಾಗಿ ಶ್ರೀಮತಿ ಮಲ್ಲೇಶ್ವರಿ ಜುಜಾರೆ, ಎ.ಎಲ್.ಟಿ.(ಜಿ) ಕಾರ್ಯನಿರ್ವಹಿಸಿರುತ್ತಾರೆ. ಸಂಜೆ 5 ಗಂಟೆಗೆ ಶಿಬಿರದ ಉದ್ಘಾಟನೆಯನ್ನು ನೆರವೇರಿಸಲಾಯಿತು. ಈ ಕಾರ್ಯಕ್ರಮದ ಅಧ್ಯಕ್ಷರಾಗಿ ಶ್ರೀ ಹೆಚ್.ಎಂ. ಸಿದ್ಧರಾಮಸ್ವಾಮಿ, ಮುಖ್ಯ ಅತಿಥಿಗಳಾಗಿ ಪಂಪ ಸರೋವರದ ಅಧಿಪತಿಯಾದ ಶ್ರೀ ರಾಮ ಬಾಬಾ ರಾಮದೇವ್ ಭಾಗವಹಿಸಿದ್ದರು. ಇದೇ ಸಂದರ್ಭದಲ್ಲಿ ಶ್ರೀ ಸಿದ್ಧರಾಮ ಸ್ವಾಮಿಯವರ ಹುಟ್ಟುಹಬ್ಬವನ್ನು ಆಚರಿಸಲಾಯಿತು. ಶ್ರೀ ಬಾಬಾ ರಾಮದೇವ್ ಇವರು ರೋವರ್ಸ್ ಮತ್ತು ರೇಂಜರ್ಸ್‌ಗಳಿಗೆ ಆಶೀರ್ವಚನವನ್ನು ನೀಡಿ ಪಂಪಾ ಸರೋವರದ ಮಹತ್ವ ಮತ್ತು ಹಿನ್ನೆಲೆ ಕುರಿತು ತಿಳಿಸಿದರು.

ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಪ್ರಾಂಶುಪಾಲರಾದ ಶ್ರೀ ತಿಮ್ಮಾರೆಡ್ಡಿ ಮೇಟಿ ಹಾಗೂ ಉಪನ್ಯಾಸಕರು ಶಿಬಿರಕ್ಕೆ ಭೇಟಿನೀಡಿ ಶಿಬಿರಾರ್ಥಿಗಳು ನಡೆಸುವ ಕಾರ್ಯಚಟುವಟಿಕೆಗಳನ್ನು ಕಂಡು ಅಭಿನಂದಿಸಿದರು. ವಿದ್ಯುತ್ ಗುತ್ತಿಗೆದಾರರಾದ ಶ್ರೀ ವಿಜಯ್‌ಕುಮಾರ್ ರವರು ಧ್ಯಾನದ ಬಗ್ಗೆ ವಿಷಯಗಳನ್ನು ತಿಳಿಸಿದರು.

ಮಾರ್ಚಿ 16 ರಂದು ಮುಂಜಾನೆ ಸರ್ವಧರ್ಮ ಪ್ರಾರ್ಥನೆಯನ್ನು ಮಾಡಲಾಯಿತು. ಉಪಹಾರದ ನಂತರ ಲಿಖಿತ ಪರಿಕ್ಷೆಯನ್ನು ಏರ್ಪಡಿಸಲಾಯಿತು. ಊಟದ ನಂತರ ಸಮಾರೋಪ ಸಮಾರಂಭವನ್ನು ಏರ್ಪಡಿಸಲಾಯಿತು. ಈ ಸಮಾರೋಪ ಸಮಾರಂಭವನ್ನು ಏರ್ಪಡಿಸಲಾಯಿತು. ಈ ಸಮಾರೋಪ ಸಮಾರಂಭದಲ್ಲಿ ಶ್ರೀ ಹೆಚ್.ಎಂ. ಸಿದ್ಧರಾಮಸ್ವಾಮಿ, ಶ್ರೀ ಪಿ. ನರಸಿಂಹಲು, ಅಧ್ಯಕ್ಷರು ಸಣ್ಣಾಪುರ ಗ್ರಾಮ ಪಂಚಾಯಿತಿ. ಶ್ರೀ ಕೆ. ಮಲ್ಲಿಕಾರ್ಜುನ, ವರದಿಗಾರರು, ಈನಾಡು ದಿನಪತ್ರಿಕೆ, ಶ್ರೀ ಹೆಚ್.ಎಂ. ಗುರುಪಾದ ಸ್ವಾಮಿ, ಕಾರ್ಯದರ್ಶಿ ಶ್ರೀ ಗುರು ರುದ್ರೇಶ್ವರ ಗ್ರಾಮಾಭಿವೃದ್ಧಿ ವಿದ್ಯಾಪೀಠ, ಮರಳಿ, ಶ್ರೀ ಮಲ್ಲಪ್ಪ ಬೆಂಚಿಮಠ್, ಜಿಲ್ಲಾ ಪದಾಧಿಕಾರಿಗಳು ಭಾಗವಹಿಸಿದ್ದರು.

* ಸಮಾಜದಲ್ಲಿ ವಿವಿಧ ಪ್ರದೇಶದಲ್ಲಿ ವಾಸಿಸುವ ಜನರೊಂದಿಗೆ ಬೆರೆತು ಅವರ ಸಮಸ್ಯೆಗಳನ್ನು ಅರಿತು ಅವರಿಗೆ ಕೈಲಾದಷ್ಟು ಸೇವೆ ಸಲ್ಲಿಸುವುದರ ಮೂಲಕ ರೋವರ್ಸ್-ರೇಂಜರ್ಸ್‌ಗಳು ಸಮಾಜಮುಖಿಯಾದ ಸೇವೆ ಸಲ್ಲಿಸಲು ಮುಂದಾಗಬೇಕು ಎಂದು ರಾಯಚೂರು ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಪ್ರಭಾರಿ ಪ್ರಾಚಾರ್ಯ ಶ್ರೀ ಪ್ರಾಣೇಶ ಕುಲಕರ್ಣಿ ಇವರು ಹೇಳಿದರು. ಮಾರ್ಚಿ 22 ರಂದು ಜಿಲ್ಲಾ ಸ್ಕೌಟ್ ಭವನದಲ್ಲಿ ನೇತಾಜಿ ಸುಭಾಷಚಂದ್ರ ಬೋಸ್ ರೋವರ್ ಘಟಕದಿಂದ ಜನಜಾಗೃತಿಯ ಕಾರ್ಯಕ್ರಮ ಶಿಬಿರದ ಸಮಾರೋಪ ಸಮಾರಂಭದ ಮುಖ್ಯ ಅತಿಥಿಗಳಾಗಿ ಮಾತನಾಡುತ್ತಿದ್ದರು.

ಮುಖ್ಯ ಅತಿಥಿಗಳಾಗಿ ಪ್ರೊ॥ ಲಕ್ಷ್ಮಣರಾವ್ ಭೋಸಲೆ ಮಾತನಾಡಿ, ವಿಶ್ವ ಜಲ ದಿನಾಚರಣೆಯ ದಿನದಂದು ರೋವರ್ಸ್-ರೇಂಜರ್ಸ್‌ಗಳು ನೀರಿನ ಬಗ್ಗೆ ಜನ ಜಾಗೃತಿ ಕಾರ್ಯಕ್ರಮಗಳನ್ನು ಹಾಕಿಕೊಂಡು ಕಾರ್ಯನಿರ್ವಹಿಸುವುದರೊಂದಿಗೆ ಶಿಸ್ತು, ಸೇವಾ ಮನೋಭಾವ ಮತ್ತು ಸ್ವಯಂ ಮೌಲ್ಯಮಾಪನ ಮಾಡಿಕೊಳ್ಳುವಲ್ಲಿ ಭಾರತ್ ಸ್ಕೌಟಿಂಗ್-ಗೈಡಿಂಗ್ ಸಹಕಾರಿಯಾಗಿದೆ ಎಂದರು. ಶ್ರೀಮತಿ ಅಜೀಜಾ ಸುಲ್ತಾನ ಜಿಲ್ಲಾ ಆಯುಕ್ತರು(ಗೈ) ಹಾಗೂ ಶ್ರೀ ಆರ್. ಹೆಚ್. ಸಾಗರ್ ಜಿಲ್ಲಾ ತರಬೇತಿ ಆಯುಕ್ತರು (ಗೈ) ಇವರು ಸಾಮಾನ್ಯ ಮಾಹಿತಿ ನೀಡಿದರು. ಈ ಸಂದರ್ಭದಲ್ಲಿ ರಾವುತರಾವ್ ಬರೂರ ಜಿಲ್ಲಾ ಸಂಘಟನಾ ಆಯುಕ್ತರು(ಸ್ಕೌ) ಡಾ॥ ಶಿವಯ್ಯ ಹಿರೇಮಠ ರೋವರ್ ಸ್ಕೌಟ್ ಲೀಡರ್ ಹಾಗೂ ರೋವರ್ಸ್ ಶಿಬಿರಾರ್ಥಿಗಳು ಉಪಸ್ಥಿತರಿದ್ದರು.

## ಮಂಡ್ಯ

ಏಪ್ರಿಲ್ 1 ರಂದು "ವಿಶ್ವ ಜಲಸಂರಕ್ಷಣಾ ದಿನಾಚರಣೆ" ಯನ್ನು, ಮಂಡ್ಯ ಜಿಲ್ಲಾ ಸಂಸ್ಥೆ ವತಿಯಿಂದ ಸರ್ಕಾರಿ ಪ್ರೌಢಶಾಲೆ, ಗೆಜ್ಜಲಗೆರೆ, ಮದ್ದೂರು ತಾಲ್ಲೂಕು ಇಲ್ಲಿ ಆಚರಿಸಲಾಯಿತು. ಕಾರ್ಯಕ್ರಮವನ್ನು ಸ್ಕೌಟ್ಸ್-ಗೈಡ್ಸ್ ಪ್ರಾರ್ಥನೆಯೊಂದಿಗೆ ಶಾಲೆಯ ಗೈಡ್ಸ್‌ಗಳು ಪ್ರಾರಂಭಿಸಿದರು, ಕಾರ್ಯಕ್ರಮದ ಔಚಿತ್ಯಪೂರ್ಣತೆಯನ್ನು ಕುರಿತು ಸಂಸ್ಥೆಯ ಜಿಲ್ಲಾ ಸಂಘಟಕ ಶ್ರೀ ಬಿ.ಎಂ. ಲೋಕೇಶ್ ರವರು ಪ್ರಾಸ್ತಾವಿಕ ನುಡಿಗಳ ಮೂಲಕ ಮನವರಿಕೆ ಮಾಡಿದರು.

ಕಾರ್ಯಕ್ರಮದ ಉದ್ಘಾಟನೆಯನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀಮತಿ ಮೀರಾಶಿವಲಿಂಗಯ್ಯನವರು ಸಸ್ಯಕ್ಕೆ ನೀರೆರೆಯುವ ಮೂಲಕ ಉದ್ಘಾಟಿಸಿದರು. ಈ ಕಾರ್ಯಕ್ರಮವನ್ನು ಜಿಲ್ಲಾದ್ಯಂತ ಹಮ್ಮಿಕೊಳ್ಳಲು ಮಾರ್ಗದರ್ಶನ ನೀಡಿದರು, ಮುಖ್ಯ ಅತಿಥಿಗಳಾಗಿ ಗ್ರಾಮ ಪಂಚಾಯತಿ ಉಪಾಧ್ಯಕ್ಷರಾದ ಶ್ರೀ ಗುರುಮೂರ್ತಿ, ಸದಸ್ಯರಾದ ಶ್ರೀಮತಿ ಸುಜಾತ, ಎಸ್.ಡಿ.ಎಂ.ಸಿ. ಅಧ್ಯಕ್ಷರಾದ ಶ್ರೀಮತಿ ಜಾನಕಿ ಮತ್ತು ಗ್ರಾಮದ ಮುಖಂಡರಾದ ಶ್ರೀ ಧರ್ಮಪ್ರಭು ಇವರುಗಳು ಆಗಮಿಸಿದ್ದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿದ್ದ ಶಾಲೆಯ ಮುಖ್ಯ ಶಿಕ್ಷಕರಾದ ಶ್ರೀ ಮಂಜಪ್ಪನವರು ವಿಷಯ ಕುರಿತು ಪ್ರಧಾನ ಭಾಷಣ ಮಾಡಿದರು. ಶಾಲೆಯ ಸಹ ಶಿಕ್ಷಕರಾದ ಶ್ರೀ ಯೋಗಾನಂದರವರು ಎಲ್ಲರನ್ನು ಸ್ವಾಗತಿಸಿದರು. ಮತ್ತೋರ್ವ ಸಹ ಶಿಕ್ಷಕ ಶ್ರೀ ನಾಗರಾಜು ವಂದಿಸಿದರು. ಕ್ಯಾಪ್ಟನ್ ಶ್ರೀಮತಿ ಶಿವಕುಮಾರಿ ಕಾರ್ಯಕ್ರಮ ನಿರೂಪಿಸಿದರು. ಕಾರ್ಯಕ್ರಮವನ್ನು ಜಿಲ್ಲಾ ಸಂಘಟಕರಾದ ಶ್ರೀಮತಿ ನಾಗರತ್ನ ಕೆ.ಎಂ. ಇವರು ಆಯೋಜಿಸಿದ್ದರು.



## ಮೈಸೂರು

ಏಪ್ರಿಲ್ 4 ರಂದು ಮೈಸೂರು ಜಿಲ್ಲೆಯ ಎಲ್ಲಾ ಪ್ರಥಮ ದರ್ಜೆ ಕಾಲೇಜುಗಳ ಪ್ರಾಂಶುಪಾಲರುಗಳು ಮತ್ತು ರೋವರ್ಸ್ ಮತ್ತು ರೇಂಜರ್ಸ್ ಘಟಕಗಳಿಗೆ ನಿಯೋಜಿತಗೊಂಡಿರುವ ಉಪನ್ಯಾಸಕರುಗಳಿಗೆ ಒಂದು ದಿನದ ಕಾರ್ಯಾಗಾರವನ್ನು ಭಾರತ್ ಸ್ಕೌಟ್ಸ್-ಗೈಡ್ಸ್, ಜಿಲ್ಲಾ ಸಂಸ್ಥೆ, ಶ್ರೀ ಜಯಚಾಮರಾಜೇಂದ್ರ ಸ್ಕೌಟ್ಸ್-ಗೈಡ್ಸ್ ಭವನ ಮೈಸೂರು ಇಲ್ಲಿ ಆಯೋಜಿಸಲಾಗಿತ್ತು.



ಈ ಕಾರ್ಯಾಗಾರವನ್ನು ಶ್ರೀ ರಾಘವೇಂದ್ರ ಗೋಡ್ಕಿಂಡಿ ವಿಶೇಷ ಅಧಿಕಾರಿಗಳು, ಪ್ರಾದೇಶಿಕ ಕಛೇರಿ, ಕಾಲೇಜು ಶಿಕ್ಷಣ ಇಲಾಖೆ, ಮೈಸೂರು ಇವರು ಉದ್ಘಾಟಿಸಿದರು. ಎಲ್ಲಾ ಕಾಲೇಜುಗಳಲ್ಲಿ ರೋವರ್ ಮತ್ತು ರೇಂಜರ್ ಘಟಕಗಳನ್ನು ಪ್ರಾರಂಭಿಸುವಂತೆ ಪ್ರಾಂಶುಪಾಲರುಗಳಿಗೆ ತಿಳಿಸಿದರು.

ಸಭೆಯ ಅಧ್ಯಕ್ಷತೆ ವಹಿಸಿದ್ದ ಶ್ರೀ ಪಿ. ವಿಶ್ವನಾಥ್, ಅಂತರ ರಾಷ್ಟ್ರೀಯ ಆಯುಕ್ತರು(ಸ್ಕೌಟ್) ರಾಷ್ಟ್ರೀಯ ಸಂಸ್ಥೆ ಮತ್ತು ಜಿಲ್ಲಾ ಮುಖ್ಯ ಆಯುಕ್ತರು, ಭಾರತ್ ಸ್ಕೌಟ್ಸ್-ಗೈಡ್ಸ್, ಜಿಲ್ಲಾ ಸಂಸ್ಥೆ, ಮೈಸೂರು ಇವರು ವಿದ್ಯಾರ್ಥಿಗಳಲ್ಲಿ ಶಿಸ್ತು, ನಾಯಕತ್ವ ಗುಣ ಬೆಳೆಯಲು ಸ್ಕೌಟಿಂಗ್ ಮತ್ತು ಗೈಡಿಂಗ್ ಉತ್ತಮ ಮಾರ್ಗದರ್ಶನ ನೀಡುತ್ತದೆ ಎಂದು ತಿಳಿಸಿದರು.



ಪ್ರಾರಂಭದಲ್ಲಿ ಸ್ವಾಗತ ಕೋರಿದ ಶ್ರೀ ಅಬ್ದುಲ್ ಜಮೀಲ್, ಜಿಲ್ಲಾ ಕಾರ್ಯದರ್ಶಿಗಳು, ಎಲ್ಲಾ ಕಾಲೇಜುಗಳಲ್ಲಿ ರೋವರ್ ಮತ್ತು ರೇಂಜರ್ ಘಟಕಗಳನ್ನು ಪ್ರಾರಂಭಿಸಿ ಮಕ್ಕಳಲ್ಲಿ ದೇಶಪ್ರೇಮ, ಶಿಸ್ತು ಬೆಳೆಯಲು ಸಹಕರಿಸಬೇಕೆಂದು ತಿಳಿಸಿದರು. ಶ್ರೀಮತಿ ಆರ್. ರಾಜಶ್ರೀ ಜಿಲ್ಲಾ ಗೈಡ್ ಆಯುಕ್ತರು ವಂದನಾರ್ಪಣೆ ಮಾಡಿದರು.

ಈ ಕಾರ್ಯಾಗಾರಕ್ಕೆ ಮೈಸೂರು ಜಿಲ್ಲೆಯ 15 ಕಾಲೇಜುಗಳಿಂದ ಶಿಬಿರಾರ್ಥಿಗಳು ಆಗಮಿಸಿದ್ದರು.

ರಾಜ್ಯ ಸಂಸ್ಥೆಯಿಂದ ಸಂಪನ್ಮೂಲ ವ್ಯಕ್ತಿಗಳಾಗಿ ಶ್ರೀಮತಿ ಬಿ.ವಿ. ರಾಮಲತಾ, ಸಹಾಯಕ ರಾಜ್ಯ ಆಯುಕ್ತರು, ಡಾ. ಮಾಧವ ಭಟ್, ವೃಕ್ಷಮಣಿಧಾರಕರು(ರೋವರ್) ಜಿಲ್ಲಾ ಸ್ಥಾನಿಕ ಆಯುಕ್ತರು (ರೋವರ್) ದಕ್ಷಿಣ ಕನ್ನಡ, ನಿವೃತ್ತ ಪ್ರಾಂಶುಪಾಲರು, ವಿವೇಕಾನಂದ ಕಾಲೇಜು, ದಕ್ಷಿಣ ಕನ್ನಡ ಮತ್ತು ಶ್ರೀ ಎ.ಎಂ. ಶಂಕರ್, ಎಲ್.ಟಿ. (ರೋವರ್) ಮತ್ತು ಸಹಾಯಕ ರಾಜ್ಯ ಸಂಘಟನಾ ಆಯುಕ್ತರುಗಳು ಆಗಮಿಸಿದ್ದರು.

## ಶಿವಮೊಗ್ಗ



ಮಾರ್ಚಿ 8 ರಂದು ಜಿಲ್ಲಾ ಸ್ಕೌಟ್ ಭವನದಲ್ಲಿ ಅಂತರ ರಾಷ್ಟ್ರೀಯ ಮಹಿಳಾ ದಿನಾಚರಣೆಯನ್ನು ಆಚರಿಸಲಾಯಿತು. ಮುಖ್ಯ ಅತಿಥಿಯಾಗಿ ಭಾಗವಹಿಸಿದ ಸಹ್ಯಾದ್ರಿ ಕಾಲೇಜಿನ ಸಹಾಯಕ ಪ್ರಾಧ್ಯಾಪಕರಾದ ಡಾ. ಶುಭ ಮರವಂತೆ ರವರು ಮಾತನಾಡಿ, ಮಹಿಳೆ ಮಾನಸಿಕ ಹಾಗೂ ಭೌತಿಕವಾಗಿ ಸಮಾಜದಲ್ಲಿ ಗಟ್ಟಿಯಾಗಿ ನೆಲೆಗೊಳ್ಳಬೇಕು. ತನ್ನ ಶಕ್ತಿ, ಸಾಮರ್ಥ್ಯದ ಮೂಲಕ ಗುರುತಿಸಿಕೊಳ್ಳುವಂತಾಗಬೇಕು ಪ್ರತಿಯೊಂದು ರಂಗದಲ್ಲಿ ಮಹಿಳೆಯರೇ ಮೇಲುಗೈ ಪಡೆದಿದ್ದಾರೆ ತಾವು ಸಹ ಯಾವುದರಲ್ಲೂ ಕಡಿಮೆ ಇಲ್ಲ ತಾವೆಲ್ಲರೂ ಮುನ್ನುಗ್ಗಬೇಕೆಂದು ಕರೆ ನೀಡಿದರು.

ಈ ಸಮಾರಂಭ ಅಧ್ಯಕ್ಷತೆಯನ್ನು ವಹಿಸಿದ್ದ ಜಿಲ್ಲಾ ಕಾರ್ಯದರ್ಶಿ ಶ್ರೀ ಕೆ.ಪಿ. ಬಿಂದುಕುಮಾರ್‌ರವರು ಮಾತನಾಡಿ ಹಿಂದಿನ ದಿನಗಳಲ್ಲಿ ದೇಶದ ಸ್ವಾತಂತ್ರ ಸಂಗ್ರಾಮದಲ್ಲೂ ಮಹಿಳೆಯರು ತಮ್ಮ ಸಾಮರ್ಥ್ಯದೊಂದಿಗೆ ಚಳುವಳಿಗಳಲ್ಲಿ ಮುಂದಾಳತ್ವವನ್ನು ವಹಿಸಿದ್ದರು. ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆ ಅಂತರರಾಷ್ಟ್ರೀಯ ಸ್ಕೌಟಿಂಗ್-ಗೈಡಿಂಗ್ ಅಂಗವಾಗಿದ್ದು, ಹೆಣ್ಣು ಮತ್ತು ಗಂಡು ಒಂದೇ ಸಂಸ್ಥೆಯಲ್ಲಿ ಬೆಳೆಯಲು ನೆಲಗಟ್ಟು ಕೊಟ್ಟಿದೆಯೆಂದು ಹೇಳಿದರು.

ಈ ಕಾರ್ಯಕ್ರಮದಲ್ಲಿ ಸಹ್ಯಾದ್ರಿ ಕಲಾ ಮತ್ತು ವಾಣಿಜ್ಯ ಕಾಲೇಜು, ಸಹ್ಯಾದ್ರಿ ವಿಜ್ಞಾನ ಕಾಲೇಜು, ಕಮಲಾ ನೆಹರು ಮಹಿಳಾ ಕಾಲೇಜಿನ ಸುಮಾರು 100 ರೇಂಜರ್ಸ್ ಭಾಗವಹಿಸಿದ್ದರು. ಶ್ರೀಮತಿ ಅರುಣಮಾಲಾ ಜಿಲ್ಲಾ ತರಬೇತಿ ಗೈಡ್ ಆಯುಕ್ತರು ಸ್ವಾಗತಿಸಿದರೆ, ರೇಂಜರ್ ಕುಮಾರಿ ಚಂದನ ಎಲ್ಲರನ್ನು ವಂದಿಸಿದರು. ಎ.ಎಸ್.ಓ.ಸಿ. ಶ್ರೀಮತಿ ಭಾರತಿ ಡಯಾಸ ಕಾರ್ಯಕ್ರಮ ನಿರೂಪಿಸಿದರು. ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ನೂರ್ ಅಹಮದ್, ಹಿರಿಯ ಸ್ಕೌಟರ್ ಶ್ರೀ ವೈ.ಆರ್. ವೀರೇಶಪ್ಪ, ಡಿಟಿಸಿ(ಎಸ್.) ಶ್ರೀ ಎ.ವಿ. ರಾಜೇಶ್ ಹಾಗೂ ರೋವರ್ಸ್ ಕಾರ್ಯಕ್ರಮ ರೂಪಿಸುವಲ್ಲಿ ಸಹಕಾರ ನೀಡಿದರು.



* ಫೆಬ್ರವರಿ 22 ರಂದು ಲಾರ್ಡ್ ಬೇಡನ್ ಪಾವೆಲ್ ಹಾಗೂ ಲೇಡಿ ಬೇಡನ್ ಪಾವೆಲ್ ರ ಜನ್ಮ ದಿನಾಚರಣೆ ಅಂಗವಾಗಿ ಹಿಮಾಲಯ ವೃಕ್ಷಮಣಿಧಾರಕರ ಸಮಾವೇಶ ಹಾಗೂ ಸ್ಕೌಟರ್ಸ್-ಗೈಡರ್ಸ್‌ಗಳ ಕಾರ್ಯಾಗಾರವನ್ನು ಜಿಲ್ಲಾ ಸ್ಕೌಟ್ ಭವನದಲ್ಲಿ ಹಮ್ಮಿಕೊಳ್ಳಲಾಗಿತ್ತು. ಬೆಳಿಗ್ಗೆ 10-30ಕ್ಕೆ ಸರಿಯಾಗಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಶಿಕ್ಷಣ

ಸಂಯೋಜಕಿಯಾದ ಶ್ರೀಮತಿ. ಗಿರಿಜಮ್ಮರವರು ದೀಪ ಬೆಳಗಿಸುವುದರ ಮೂಲಕ ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿ 17ನೇ ರಾಷ್ಟ್ರೀಯ ಜಾಂಬೂರಿಯಲ್ಲಿ ಆದ ಅನುಭವ ಹಾಗೂ ಈ ವರ್ಷ ಗಣರಾಜ್ಯೋತ್ಸವಕ್ಕೆ ಪೆರೇಡ್ ಗ್ರೌಂಡ್‌ಗೆ ಸ್ಕೌಟ್ಸ್-ಗೈಡ್ಸ್‌ಗಳು ಬ್ಯಾಂಡ್ ಪ್ರದರ್ಶನಕ್ಕೆ ಅವಕಾಶ ಪಡೆದ ಬಗ್ಗೆ ಸಂತೋಷ ವ್ಯಕ್ತಪಡಿಸಿ ಇನ್ನು ಹೆಚ್ಚಿನ ರೀತಿಯಲ್ಲಿ ಇಂತಹ ಅವಕಾಶಗಳು ದೊರೆಯಲೆಂದು ಆಶಿಸಿದರು. ಲಾರ್ಡ್ ಬೇಡನ್ ಪಾವೆಲ್ ಹಾಗೂ ಲೇಡಿ ಬೇಡನ್ ಪಾವೆಲ್ ರವರ ಭಾವಚಿತ್ರಕ್ಕೆ ಪುಷ್ಪಾರ್ಚನೆ ಮಾಡಿ ಅವರ ಬಗ್ಗೆ ಹಿರಿಯ ಸ್ಕೌಟರ್ ಶ್ರೀ ರಂಗಪ್ಪರವರು ಮಾತನಾಡಿದರು. ಹಿರಿಯ ಸ್ಕೌಟರ್ ಶ್ರೀ ಆರ್.ಕೆ. ರಾಮಸಿಂಗ್ ರವರು ತಮ್ಮ ಅನುಭವವನ್ನು ಹಂಚಿಕೊಂಡರು. ಶ್ರೀ ಕೆ.ಪಿ. ಬಿಂದುಕುಮಾರ್ ಜಿಲ್ಲಾ ಕಾರ್ಯದರ್ಶಿರವರು ಮಾತನಾಡಿ ನಾವೆಲ್ಲರೂ ಸೇರಿ ಸ್ಕೌಟಿಂಗ್‌ನ್ನು ಬೆಳೆಸೋಣ ಪ್ರತಿಯೊಂದು ಶಾಲೆಯಲ್ಲಿ ಸ್ಕೌಟಿಂಗ್ ಗೈಡಿಂಗ್ ದಳ ಹೊಂದುವಂತೆ ನಾವು ಶ್ರಮಿಸೋಣ ಎಂದರು. ಜಿಲ್ಲಾ ಮುಖ್ಯ ಆಯುಕ್ತರು ಹಾಗೂ ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿದ ಶ್ರೀ ಹೆಚ್.ಡಿ. ರಮೇಶ್ ಶಾಸ್ತ್ರಿಯವರು ಮಾತನಾಡಿ ಬಂದಂತಹ ಸ್ಕೌಟರ್ಸ್ - ಗೈಡರ್ಸ್‌ಗೆ ಅಭಿನಂದಿಸಿ ಜಾಂಬೂರಿಯಲ್ಲಿ ಜಿಲ್ಲೆಯಿಂದ ಹೆಚ್ಚಿನ ಸಂಖ್ಯೆಯಲ್ಲಿ ಹಾಗೂ ಹೆಚ್ಚಿನ ಚಟುವಟಿಕೆಯಲ್ಲಿ ಮಕ್ಕಳು ಭಾಗವಹಿಸಿ ರಾಜ್ಯಕ್ಕೆ ಒಳ್ಳೆಯ ಹೆಸರನ್ನು ತಂದುಕೊಟ್ಟಿರುತ್ತೀರಿ ಹಾಗೇ ನಾವು ಮುಂದಿನ ದಿನಗಳಲ್ಲಿ ಮಕ್ಕಳಿಗೆ ಇದರ ಬಗ್ಗೆ ಒಳ್ಳೆ ಮಾಹಿತಿಯನ್ನು ಕೊಟ್ಟು ರಾಜ್ಯಪುರಸ್ಕಾರ, ರಾಷ್ಟ್ರಪತಿ ಪುರಸ್ಕಾರಕ್ಕೆ ಮಕ್ಕಳು ಭಾಗವಹಿಸುವಂತೆ ತಾವುಗಳು ಹೆಚ್ಚಿನ ಗಮನ ವಹಿಸಿ ಎಂದರು. ಹಿರಿಯ ಸ್ಕೌಟರ್ ಶ್ರೀ ವೈ.ಆರ್. ವೀರೇಶಪ್ಪ ಸ್ವಾಗತಿಸಿದರೆ ಜಿಲ್ಲಾ ತರಬೇತಿ ಆಯುಕ್ತರು(ಗೈ) ಶ್ರೀಮತಿ ಅರುಣಮಾಲಾರವರು ವಂದಿಸಿದರು. ಜಿಲ್ಲಾ ತರಬೇತಿ ಆಯುಕ್ತರು(ಸ್ಕೌ) ಶ್ರೀ ಎ.ವಿ. ರಾಜೇಶ್‌ರವರು ಪ್ರಾಸ್ತಾವಿಕ ನುಡಿ ನುಡಿದರು. ಎ.ಎಸ್.ಓ.ಸಿ. ಶ್ರೀಮತಿ ಭಾರತಿ ಡಾಯಸ್ ರವರು ನಿರೂಪಿಸಿದರು. ಸಭೆಯಲ್ಲಿ ಜಿಲ್ಲಾ ಖಜಾಂಚಿ, ಶ್ರೀ ಹೆಚ್. ಪರಮೇಶ್ವರ, ಡಿ.ಓ., ಶ್ರೀ ಹೆಚ್. ಶಿವಶಂಕರ್ ಉಪಸ್ಥಿತರಿದ್ದರು.

ನಂತರದಲ್ಲಿ ಹಿಮಾಲಯ ವೃಕ್ಷಮಣಿಧಾರಕರಿಗೆ ಹಾಗೂ ಸ್ಕೌಟರ್ಸ್-ಗೈಡರ್ಸ್‌ಗಳಿಗೆ ರಾಜ್ಯ ಪುರಸ್ಕಾರ್ ಆನ್‌ಲೈನ್ ಫಾರ್ಮ ತುಂಬುವ ಬಗ್ಗೆ ಮಾಹಿತಿ ನೀಡಿದರು. ರಾಜ್ಯ ಸಂಸ್ಥೆಯಿಂದ ಬಂದಂತಹ ಕೆಲವು ತರಬೇತಿಯ ವಿಷಯಗಳ ಬಗ್ಗೆ, ಮಕ್ಕಳ ಹಾಗೂ ವಯಸ್ಕ ನಾಯಕರ ಪ್ರಗತಿಪರ ಶಿಕ್ಷಣದ ಬಗ್ಗೆ ಮಾಹಿತಿ ನೀಡಲಾಯಿತು.

## ತುಮಕೂರು

ಏಪ್ರಿಲ್ 14 ರಿಂದ 16 ರ ವರೆಗೆ ತುಮಕೂರು ಜಿಲ್ಲಾ ಸಂಸ್ಥೆಯ ವತಿಯಿಂದ ಶ್ರೀ ಸಿದ್ಧಗಂಗಾ ಎಲಿಮೆಂಟರೀ ಶಾಲಾ ಆವರಣದಲ್ಲಿ ತರಬೇತಿ ಶಿಬಿರವನ್ನು ಆಯೋಜಿಸಲಾಗಿತ್ತು. ವಿವಿಧ ತಾಲ್ಲೂಕುಗಳಿಂದ 120 ಸ್ಕೌಟ್ಸ್‌ಗಳು ಮತ್ತು 80 ಗೈಡ್ಸ್‌ಗಳು ತರಬೇತಿಯಲ್ಲಿ ಭಾಗವಹಿಸಿದ್ದರು. ಸ್ಕೌಟ್ ವಿಭಾಗಕ್ಕೆ ನಾಯಕರಾಗಿ ಮೈಸೂರಿನ ಶ್ರೀ ಕೆ.ಜಿ. ಗೋಪಾಲಕೃಷ್ಣ ಮತ್ತು ರೋವರ್ ಲೀಡರ್ ಬಾಲಕೃಷ್ಣ ಕರ್ತವ್ಯ ನಿರ್ವಹಿಸಿದರು. ಗೈಡ್ ವಿಭಾಗಕ್ಕೆ ಬೆಂಗಳೂರಿನ ಕುಮಾರಿ ಹೊನ್ನಮ್ಮನವರು ನಾಯಕಿಯಾಗಿ ಕರ್ತವ್ಯ ನಿರ್ವಹಿಸಿದರು.

ಪ್ರಥಮ ಸೋಪಾನ, ದ್ವಿತೀಯ ಸೋಪಾನ ಮತ್ತು ತೃತೀಯ ಸೋಪಾನಕ್ಕೆ ಸಂಬಂಧಿಸಿದ ಎಲ್ಲಾ ವಿಷಯಗಳನ್ನು ಎ.ಪಿ.ಆರ್.ಓ. ಭಾಗ-2 ಮತ್ತು ಎ.ಪಿ.ಆರ್.ಓ. ಭಾಗ-3 ಪ್ರಕಾರ ವಿಷಯಗಳನ್ನು ಆಯಾ ಹಂತಗಳಲ್ಲಿ ಬೋಧನೆ ಮಾಡಲಾಯಿತು.

ಈ ಸಂದರ್ಭದಲ್ಲಿ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು, ಜಿಲ್ಲಾ ಸಂಘಟಕರು, ಜಿಲ್ಲಾ ತರಬೇತಿ ಆಯುಕ್ತರು, ವಿವಿಧ ಶಾಲೆಗಳಿಂದ ಆಗಮಿಸಿದ್ದ ಸ್ಕೌಟ್-ಗೈಡ್ ಶಿಕ್ಷಕರು/ಶಿಕ್ಷಕಿಯರು ಹಾಜರಿದ್ದರು.

## ಉಡುಪಿ

ಭೂಮಿಯಲ್ಲಿ ಬದುಕುವ ಹಕ್ಕು ಮನುಷ್ಯನಿಗಿದ್ದಷೇ ಇತರ ಜೀವಿಗಳಿಗೂ ಕೂಡ ಇದೆ, ಆದರೆ ಮನುಷ್ಯನ ಸ್ವಾರ್ಥದಿಂದಾಗಿ ಅನೇಕ ಜೀವಿಗಳಿಂದು ಕಣ್ಮರೆಯಾಗಿದೆ. ಅಳಿದುಳಿದ ಜೀವ ಸಂಕುಲವನ್ನು ಸಂರಕ್ಷಿಸುವಲ್ಲಿ ಯುವ ಜನಾಂಗ ಬಹಳ ಮುಖ್ಯ ಪಾತ್ರ ವಹಿಸಬೇಕಾಗಿದೆ. ಎಂದು ಸೋಮೇಶ್ವರ ವನ್ಯಜೀವಿ ಸಂರಕ್ಷಣಾಧಿಕಾರಿ ಶ್ರೀ ತ್ಯಾಗರಾಜ್ ನುಡಿದರು.



ಫೆಬ್ರವರಿ 25 ಮತ್ತು 26 ರಂದು ಭಾರತ್ ಸ್ಕೌಟ್ಸ್ - ಗೈಡ್ಸ್ ಉಡುಪಿ ಜಿಲ್ಲಾ ಸಂಸ್ಥೆ ಹಾಗೂ ಅರಣ್ಯ ಇಲಾಖೆ ಕರ್ನಾಟಕ ಸರಕಾರ ಇವರ ಜಂಟಿ ಆಶ್ರಯದಲ್ಲಿ ರೋವರ್ಸ್-ರೇಂಜರ್ಸ್‌ಗಳಿಗೆ ಜಿಲ್ಲಾ ಮಟ್ಟದ ಚಾರಣ ಮತ್ತು ಸ್ವಚ್ಛತಾ ಶಿಬಿರವನ್ನು ಹೆಬ್ರಿ ಸಮೀಪದ ಜೊಮ್ಲು ತೀರ್ಥದಲ್ಲಿ ಏರ್ಪಡಿಸಲಾಗಿತ್ತು. ಶಿಬಿರಾಧಿಕಾರಿ ಶ್ರೀ ಉದಯ ಶೆಟ್ಟಿ ಕೆ. ಸಹ ಶಿಬಿರಾಧಿಕಾರಿಗಳಾದ ಡಾ॥ ಜಯರಾಮ್ ಶೆಟ್ಟಿಗಾರ್, ಶ್ರೀ ಮಂಜುನಾಥ್ ಬಿ.ಡಿ. ಶ್ರೀ ಸುಬ್ರಮಣ್ಯ, ಶ್ರೀಮತಿ ಟಿಜಾ ತೋಮಸ್, ಶ್ರೀಮತಿ ಸುಮನ್ ಶೇಖರ್, ಶ್ರೀ ನಿತಿನ್ ಅಮೀನ್, ಅರಣ್ಯ ಇಲಾಖೆ ಸಿಬ್ಬಂಧಿ ಹಾಗೂ ಸ್ಥಳೀಯ ನಾಗರೀಕರು ಸ್ವಚ್ಛತಾ ಅಭಿಯಾನದಲ್ಲಿ ಪಾಲ್ಗೊಂಡರು.

ಕಾರ್ಯಕ್ರಮದ ಉದ್ಘಾಟನೆಯನ್ನು ಸ್ಥಳೀಯ ಗ್ರಾಮ ಪಂಚಾಯತ್ ಅಧ್ಯಕ್ಷೆ ಶ್ರೀಮತಿ ವಿಮಲಾ ಇವರು ನೆರವೇರಿಸಿದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಕಲ್ಮಾಡಿ ಶೇಖರ್ ಪೂಜಾರಿ ವಹಿಸಿದ್ದರು. ಸರಕಾರಿ ಹಿರಿಯ ಪ್ರಾಥಮಿಕ ಶಾಲೆಯ ಮುಖ್ಯ ಶಿಕ್ಷಕರು ಉಪಸ್ಥಿತರಿದ್ದರು.

* ಫೆಬ್ರವರಿ 10 ಮತ್ತು 11 ರಂದು ಪಿ.ಕೆ.ಸ್. ಹೈಸ್ಕೂಲ್, ಕಲತ್ತೂರು ಇಲ್ಲಿ ಕಾಪು ಸ್ಥಳೀಯ ಸಂಸ್ಥೆ ರ್‍ಯಾಲಿ ನಡೆಯಿತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಕಾಪು ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಪ್ರಭಾಕರ್ ಶೆಟ್ಟಿ ವಹಿಸಿದ್ದರು. ಕಾಪು ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದಶ್ರೀ ಅಲ್ಬನ್ ರೊಡ್ರಿಗಸ್, ಕಾರ್ಯಕ್ರಮವನ್ನು ಉದ್ಘಾಟಿಸಿದರು. ಶಾಲಾ ಮುಖ್ಯ ಶಿಕ್ಷಕರು ಹಾಗು ಶಿಬಿರದ ನಾಯಕರಾದ ಶ್ರೀ ಗಂಗಾ ನಾಯಕ್ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಉಪಸ್ಥಿತರಿದ್ದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಶೇಖರ್ ಪೂಜಾರಿ ಕಾರ್ಯಕ್ರಮದಲ್ಲಿ ಭಾಗವಹಿಸಿದ ಸ್ಕೌಟ್-ಗೈಡ್‌ಗಳಿಗೆ ಶುಭ ಹಾರೈಸಿದರು. ಶಿಬಿರದಲ್ಲಿ ಚಾರಣ, ಸರ್ವಧರ್ಮ ಪ್ರಾರ್ಥನೆ, ಭವ್ಯ ಶಿಬಿರಾಗ್ನಿ, ಬೆಂಕಿ ಬಳಸಿ ಅಡುಗೆ, ಬೆಂಕಿ ಬಳಸದೆ ಪಾನೀಯ ತಯಾರಿ, ಮುಖವಾಡ ತಯಾರಿ, ಜನಪದ ನೃತ್ಯ, ಮುಂತಾದ ಕಾರ್ಯಕ್ರಮಗಳಲ್ಲಿ ವಿದ್ಯಾರ್ಥಿಗಳು ಸಕ್ರಿಯವಾಗಿ ಭಾಗವಹಿಸಿದ್ದರು.



## • Gone Home •



R. Chaitanya Kumar

Sri R. Chaitanya Kumar S/o. Late Phillipines Ramaiah Managing Partner of M/s. R. Chaitanya Kumar & Associates Engineers & Developers, passed away on Tuesday the 18th April 2017 at Bengaluru after brief illness.

He was aged about 70 years. He is survived by his wife Smt. Uma Chaitanya Kumar & son Sri Divya Swaroop and Grand Son and other members of his Family.

We Pray God Almighty to give necessary Courage and Strength to his wife, son and other members of his family to bear this irreparable loss.

May His Soul Rest in Peace.

- State Secretary

# The Joy of Camping



This picture was taken in 1965 during the monthly meeting of our scout group known 'Sri Krishnananda Scout Group' at Panchavati situated on 15th Cross, 8th Main Road, Malleswaram. Along with me in the picture are the junior string of scouts.

Sri Krishnananda Scout Group was started in 1957 by Herenjal Gajanan. We used to regularly meet in an open ground, then located near Sri Radhakrishna Temple, opposite to Malleswaram Railway Station.

Our group was the sister concernof Hanuman Scout Group of Tumukuru, Jaya Scout Group of Mysuru and Chamundi Scout Group of Bengaluru.

Ours was a small but a close-knit group. There were 14 scouts and the numbers steadily increased. Some of the senior members such as Herenjal Gajanan, Vidyanand Kallianpur, Ramananda Bellare, Nandakumar Hattangadi, GB Kallianpur and Premanand Nagarmut regularly won prizes.

Our group made a good name for itself at the Third All India Scouts and Guides Jamboree held at Palace Grounds. Our group's junior string also held camps at Panchavati on a regular basis and would end with a campfire.

Trekking to places in and around old Bangalore was also a regular affair. After the transfer of Herenjal. Gajanan, the group was led by Vidyanand Kallianpur who later on joined the Indian Army.

After his stint, GB Kallianpur took over. Finally, the group became inactive because of the dwindling number of scouts. However, till it lasted, all of us had a wonderful time and learnt a great deal in the process.

- Source : Deccan Herald, Monday 22-03-2017

# ಪ್ರಕೃತಿ ಅಧ್ಯಯನ ಹಾಗೂ ಜೀವನ ಸೌಂದರ್ಯ

ಎನ್. ಶ್ರೀನಿವಾಸನ್, ಎಲ್.ಟಿ. (ಸ್ಕೌಟ್)

ಸ್ಕೌಟಿಂಗ್ ಶಿಕ್ಷಣದಲ್ಲಿ ಪ್ರಕೃತಿ ಅಧ್ಯಯನಕ್ಕೆ ಹೆಚ್ಚು ಒತ್ತು ನೀಡಲಾಗಿದೆ. ವಯಸ್ಕ ನಾಯಕರ ತರಬೇತಿಯಲ್ಲಿಯೂ ಸಹ ಇದನ್ನು ಕಡ್ಡಾಯವಾಗಿ ಅಳವಡಿಸಲಾಗಿದೆ.

ಬಿ.ಪಿ. ಯವರು ಪ್ರಕೃತಿ ಅಧ್ಯಯನವನ್ನು "ಜೀವನವನ್ನು ಸವಿಯುವುದು" ಎಂದು ಕರೆದಿದ್ದಾರೆ. ಜೀವನದ ಸೊಬಗನ್ನು ಸವಿಯಬೇಕಾದರೆ ಅದು ಪ್ರಕೃತಿಯ ಸೊಬಗನ್ನು ಸವಿಯುವುದರ ಮೂಲಕ ಮಾತ್ರವೇ ಸಾಧ್ಯ ಎನ್ನುತ್ತಾರೆ.

ನಾವು ನಮ್ಮ ಮಕ್ಕಳಿಗೆ ಕೇವಲ ಬದುಕುವ ಮಾರ್ಗ ಹೇಳಿಕೊಟ್ಟರಷ್ಟೇ ಸಾಲದು. ಬದುಕುವುದು ಹೇಗೆ ಎಂಬುದನ್ನು ಸಹ ಕಲಿಸಬೇಕು. ಬದುಕನ್ನು ಅನುಭವಿಸುವ ರೀತಿಯನ್ನು ಕಲಿಸಬೇಕು.

ಪ್ರಕೃತಿ ಅಧ್ಯಯನದಿಂದ ಬಾಲಕರ ಬುದ್ಧಿ ಮತ್ತು ಯೋಚನೆಗಳು ವಿಶಾಲವಾಗುತ್ತವೆ ಹಾಗೂ ಪ್ರಕೃತಿ ಸೌಂದರ್ಯವನ್ನು ಆಸ್ವಾದಿಸುವ ಶಕ್ತಿ ಪಡೆಯುತ್ತಾರೆ.

ಭಗವಂತನ ಅದ್ಭುತವಾದ ಈ ಸೃಷ್ಟಿಯಲ್ಲಿ ಭಗವಂತನನ್ನು ಕಾಣುವುದು ಮತ್ತು ಅವನ ಇಚ್ಛೆಯಂತೆ ಇತರರ ಸೇವೆ ಮಾಡುವುದರಲ್ಲಿ ಸಕ್ರಿಯವಾಗಿ ತೊಡಗಿಸಿಕೊಳ್ಳುವುದು ಇವೆರಡೂ ಧರ್ಮದ ಅಡಿಪಾಯವಾಗಿರುತ್ತದೆ.

ಸಂತೋಷ ಎನ್ನುವುದು ಆಂತರಿಕ ಮಾನಸಿಕ ಸ್ಥಿತಿ ಮಾತ್ರವಲ್ಲ. ಬಾಹ್ಯ ಇಂದ್ರಿಯ ಚಟುವಟಿಕೆಗಳ ಮೂಲಕವೂ ಸಂತೋಷ ದೊರೆತಾಗ ಅದರ ಸಂಪೂರ್ಣತೆಯ ಅರಿವುಂಟಾಗುತ್ತದೆ.

ಇತರರಿಗೆ ಸಹಾಯ ಮಾಡುವುದರಿಂದ ದೊರಕುವ ಸಂತೋಷವು ಬಾಹ್ಯ ಚಟುವಟಿಕೆಯಿಂದಾದರೆ, ಪ್ರಕೃತಿ ಆಸ್ವಾದನೆಯಿಂದ ದೊರಕುವ ಸಂತೋಷವು ಆಂತರಿಕ ಮಾನಸಿಕ ಸ್ಥಿತಿಯಾಗುತ್ತದೆ.

ವನ ವಿದ್ಯೆಯು ಒಮ್ಮೆ ಬಾಲಕರಿಗೆ ಕರಗತವಾಯಿತೆಂದರೆ ಅವರಲ್ಲಿ ಅವಲೋಕನ, ನೆನಪಿನ ಶಕ್ತಿ, ತೀರ್ಮಾನ ಕೈಗೊಳ್ಳುವಿಕೆ ಇವೆಲ್ಲವೂ ತಮ್ಮಷ್ಟಕ್ಕೆ ತಾವೇ ಬೆಳೆದು ಅವರ ವ್ಯಕ್ತಿತ್ವದ ಒಂದು ಭಾಗವಾಗುತ್ತವೆ.

ಎಳೆಯ ಮನಸ್ಸಿಗೆ, ಪ್ರಕೃತಿಯ ಅದ್ಭುತಗಳ ಪರಿಚಯವಾದಂತೆಲ್ಲಾ ಬಾಲಕರು ಅದರ ಸೌಂದರ್ಯವನ್ನು ಸವಿಯಲು ಕಲಿಯುತ್ತಾರೆ. ಸೌಂದರ್ಯವನ್ನು ಗುರುತಿಸಲು ಕಲಿತಾಗ ಎಂತಹುದೇ ದುಃಖದ ನೆರಳಿನಲ್ಲಿಯೂ ಸಂತೋಷದ ಕಿರಣವನ್ನು ಕಾಣಲು ಕಲಿಯುತ್ತಾರೆ.

ಬಾಲಕರಿಗೆ ಸೌಂದರ್ಯ ಪ್ರಜ್ಞೆ ಇಲ್ಲವೆಂದು ಸಾಮಾನ್ಯವಾಗಿ ಹೇಳುವ ಮಾತು. ಆದರೆ ನಿಜವಾಗಿಯೂ ಹಿರಿಯರಿಗಿಂತ ಬಾಲಕರಲ್ಲಿ ಸೌಂದರ್ಯ ಪ್ರಜ್ಞೆ ಉತ್ತಮವಾಗಿರುತ್ತದೆ ಎಂದು ಬೇಡನ್ ಪೊವೆಲ್‌ರವರು ಹೇಳುತ್ತಾರೆ.

ಪ್ರಕೃತಿಯ ಬಗ್ಗೆ ಬಾಲಕರ ಕಣ್ಣು ತೆರೆಸಬೇಕಾದ್ದು ಸ್ಕೌಟ್ ಮಾಸ್ಟರ್‌ನ ಆದ್ಯ ಕರ್ತವ್ಯ.

ಆಧಾರ : "Aids to Scout Mastership" – B.P.

## ಮೋಗ್ಲಿ ಬಂದನು ಮೈಸೂರ್ಗೆ

ಮೋಗ್ಲಿ ಬಂದನು ಮೈಸೂರ್ಗೆ
ಸ್ಕೌಟು ಜಾಂಬೂರಿ ನೋಡ್ಲಿಕ್ಕೆ
ಕಾಡಿನ ಗೆಳೆಯರ ಕೂಡಿದನು
ಅಪ್ಪುವಿನೊಡನೆ ಆಡಿದನು

ಚಾಮುಂಡಿಯ ಅರಮನೆ ನಗರಿ
ಬೃಂದಾವನ ಸುಂದರಿ ಕಾವೇರಿ
ಶ್ರೀಕುವೆಂಪು ರಾಮಾಯಣ ಗರಿಯು
ಸಂಗೀತ ಸಾಹಿತ್ಯ ಸಂಸ್ಕೃತಿ ಸಿರಿಯು

ಅಡಕನ ಹಳ್ಳಿಲಿ ಅರಳಿತ್ತು
ಮಕ್ಕಳ ಕಲರವ ಕೇಳಿತ್ತು
ರಾಷ್ಟ್ರಪತಿಗಳು ಹರಸಿದರು
ಜನಜಾತ್ರೆಯೇ ಸೇರಿತ್ತು

ಹದಿನೇಳನೇ ರಾಷ್ಟ್ರೀಯ ಜಾಂಬೂರಿ
ಎಂಟುದಿನದ ಸಂತಸ ಆನಂದದ ಫೇರಿ

ತರತರದಾಟವು ನಿತ್ಯ ಕವಾಯತು
ಕೂಡಿಬಾಳುವ ಕಲಿಕೆ ನಿಜಾಯತು

ಶಿಸ್ತು ಸದ್ಗುಣ ಸೇವಾಭಾವವು
ಮನುಜ ಜಾತಿ ತಾನೊಂದೆವಲವು
ಮೂವತ್ತು ಸಾವಿರ ಮಕ್ಕಳ ಮೇಳ
ಹಿರಿಯರ ಹರಕೆ ಸುಸ್ವರ ತಾಳ

ಕೂಡಿನಡೆದೆವು ನಾಳಿನ ಸುದಿನಕೆ
ಎಲ್ಲರ ಏಳಿಗೆ ನಮ್ಮಯ ಹೆಗಲಿಗೆ
ಕಬ್ಸ್‌ಗಳ ಶತಮಾನಕೆ ಈ ಸಂಮಾನ
ದಿಗಂತದಿ ಭಾರತಧ್ವಜ ಪ್ರಕಾಶಮಾನ

ಮಲ್ಲಿಗೆ ಮಸಾಲೆ ಗಂಧದ ಘಮಘಮ
ಮೊಗ್ಲಿಗೆ ಮಕ್ಕಳಿಗೆ ಜಾಂಬೂರಿ ಸಂಭ್ರಮ
ಕರ್ನಾಟಕ ಸ್ಕೌಟ್ಸ್ ಸಂಸ್ಥೆಗೆ ಜೈಜೈಯೆನ್ನಿ
ಸಂಗಮ ಸಂಚಲನ ಯಶಸಂಚಯವೆನ್ನಿ

– ಬೆಂ. ಶ್ರೀ ರವೀಂದ್ರ

## ತಾಪಕ್ಕೆ ಕಳವಳ ಗೊಳ್ಳುವ ಜೀವಿಗಳು

ಕಳವಳಗೊಳ್ಳುವ ಜೀವಿಗಳೇ ಯಾರು ನಿಮಗೆ ಆಸರೆ
ಬಿರುಕು ಒಡೆದ ಹೊಲಗಳು, ಜಲದಾರೆಯಿಲ್ಲದೆ ಕೊಳುವೆಗಳು
ಒಣಗಿನಿಂತ ಮರಗಳು, ಆಹಾರಕ್ಕಾಗಿ ಅಲೆಯುತ್ತಿರುವ ಪ್ರಾಣಿ-ಪಕ್ಷಿಗಳೇ
ತಾಪಕ್ಕೆ ಕಳವಳಗೊಳ್ಳುವ ಜೀವಿಗಳೇ

ತುಂಬಿ ಹರಿಯುವ ನದಿ-ಹಳ್ಳಗಳು ಖಾಲಿ-ಖಾಲಿ
ಬರುಡಾಗಿ ನಿಂತ ಅಚ್ಚಹಸಿರಿನ ಅರಣ್ಯಗಳು
ಇದನ್ನೆಲ್ಲಾ ನೋಡಿ ಕಳವಳಗೊಳ್ಳುವ ಮನಗಳು
ತಾಪಕ್ಕೆ ಕಳವಳಗೊಳ್ಳುವ ಜೀವಿಗಳೇ

ಗಿಡ-ಮರಗಳ ಕಡಿತದಿಂದ ಮಾಯವಾದ ಮಳೆರಾಯ
ಟಿವಿ. ಫೋನಗಳಿಂದ ಮಾಯವಾದ ಸಂಸ್ಕೃತಿ
ವಾಯುಮಾಲಿನ್ಯ-ಶಬ್ದಮಾಲಿನ್ಯದಿಂದ ಮಾಯವಾದ ಗುಬ್ಬಚ್ಚಿಗಳೇ
ತಾಪಕ್ಕೆ ಕಳವಳಗೊಳ್ಳುವ ಚಿಲಿಪಿಲಿ ಪಕ್ಷಿಗಳೇ-ವನ್ಯಜೀವಿಗಳೇ

ಪ್ರಕೃತಿಯ ಒಳಿತಿಗಾಗಿ ಪ್ರತಿಯೊಬ್ಬರೂ ಹಚ್ಚಬೇಕಾಗಿದೆ ಗಿಡ-ಮರಗಳು
ಜಾಗತೀಕರಣ ಬೇಕು ನೆಲ-ಜಲ-ಪ್ರಕೃತಿಯ ಒಳಿತಿಗಾಗಿ
ಬನ್ನಿ ಕೈ ಜೋಡಿಸಿ ನೀರು ಉಳಿಸಿ, ಮರ ಬೆಳೆಸಿ ಎಂಬ ಆಂದೋಲನ ಮಾಡೋಣ
ಕಳವಳಗೊಳ್ಳುವ ಜೀವಿಗಳೇ

– ಮೀನಾಜಫಾತಿಮಾ ಅ. ಸೂರಣಗಿ
ಗೈಡ್, 7ನೇ ತರಗತಿ, ಹಾವೇರಿ



ಮಾರ್ಚ್ 15 ರಿಂದ 18ರ ವರೆಗೆ ಸೌತ್ ವೆಸ್ಟರ್ನ್ ರೈಲ್ವೆ ರಾಜ್ಯ ತರಬೇತಿ ಕೇಂದ್ರ , ಕ್ಯಾಸ್ಟಲ್ ರಾಕ್, ಉತ್ತರ ಕನ್ನಡ ಜಿಲ್ಲೆಯಲ್ಲಿ ಚಿಕ್ಕಬಳ್ಳಾಪುರ ಜಿಲ್ಲೆಯಿಂದ ಏರ್ಪಡಿಸಿದ್ದ ಜಿಲ್ಲಾ ಮಟ್ಟದ ರೋವರ್ಸ್-ರೇಂಜರ್ಸ್‌ಗಳ ಸಮಾಗಮದಲ್ಲಿ ಭಾಗವಹಿಸಿದ ಶಿಬಿರಾರ್ಥಿಗಳು ಹಾಗೂ ಸಿಬ್ಬಂದಿ ವರ್ಗ.



ಮಾರ್ಚ್ 03 ರಿಂದ 05ರ ವರೆಗೆ ತುಮಕೂರು ಜಿಲ್ಲಾ ಸಂಸ್ಥೆ ಆಶ್ರಯದಲ್ಲಿ ಜರುಗಿದ ನಿಪುಣ್ ರೋವರ್ಸ್ ಪರೀಕ್ಷಾ ಶಿಬಿರದಲ್ಲಿ ಭಾಗವಹಿಸಿದ್ದ ಶಿಬಿರಾರ್ಥಿಗಳು ಹಾಗೂ ರಾಜ್ಯ ಮತ್ತು ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳನ್ನು ಕಾಣಬಹುದು.




ಇತ್ತೀಚೆಗೆ ಬಳ್ಳಾರಿ ಜಿಲ್ಲಾ ಸಂಸ್ಥೆಗೆ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರು ಭೇಟಿ ನೀಡಿದ ಸಂದರ್ಭದಲ್ಲಿ ಶ್ರೀ ಎ. ಶ್ರೀಧರನ್, ಉಪನಿರ್ದೇಶಕರು ಮತ್ತು ಜಿಲ್ಲಾ ಮುಖ್ಯ ಆಯುಕ್ತರು ಹಾಗೂ ಜಿಲ್ಲಾ ಪದಾಧಿಕಾರಿಗಳನ್ನು ಕಾಣಬಹುದು.



ಮಾರ್ಚ್ 11 ಮತ್ತು 12 ರಂದು ಚಾಮರಾಜನಗರ ಜಿಲ್ಲೆ ಯಳಂದೂರಿನಲ್ಲಿ ಜರುಗಿದ ಜಿಲ್ಲಾ ಮಟ್ಟದ ರ್‍ಯಾಲಿಯ “ಕ್ಯಾಂಡಲ್ ಲೈಟ್” ಪಥ ಸಂಚಲನಾ ಕಾರ್ಯಕ್ರಮವನ್ನು ಶ್ರೀ ಶಿವಸ್ವಾಮಿ, ವೃತ್ತ ಆರಕ್ಷಕ ನಿರೀಕ್ಷಕರು, ಯಳಂದೂರು ಇವರು ಉದ್ಘಾಟಿಸಿದರು ಚಿತ್ರದಲ್ಲಿ ಶ್ರೀ ವಿ. ಮಲ್ಲಿಕಾರ್ಜುನ ಸ್ವಾಮಿ, ಡಿ.ಸಿ.(ಎಸ್) ಮತ್ತು ಇತರ ಜಿಲ್ಲಾ ಹಾಗೂ ಸ್ಥಳೀಯ ಸಂಸ್ಥೆ ಪದಾಧಿಕಾರಿಗಳನ್ನು ಕಾಣಬಹುದು.



ಮಾರ್ಚ್ 4ರಂದು ಹಾವೇರಿ ಜಿಲ್ಲಾ ಸಂಸ್ಥೆ ಏರ್ಪಡಿಸಿದ್ದ ಜಿಲ್ಲಾ ಮಟ್ಟದ ಸ್ಕೌಟ್‌ರ್ಸ್ ಮತ್ತು ಗೈಡರ್ಸ್ ಸಮಾವೇಶದ ಉದ್ಘಾಟನಾ ಸಮಾರಂಭದಲ್ಲಿ ಶ್ರೀ ರುದ್ರಪ್ಪ ಮಾ. ಲಮಾಣಿ, ಮಾನ್ಯ ಮುಜರಾಯಿ ಹಾಗೂ ಜವಳಿ ಖಾತೆ ಸಚಿವರು, ಶ್ರೀ ಕೊಟ್ರೇಶಪ್ಪ ರು. ಬಸೇಗಣ್ಣಿ, ಅಧ್ಯಕ್ಷರು, ಜಿಲ್ಲಾ ಪಂಚಾಯಿತಿ, ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು, ಶ್ರೀಮತಿ ಬಿ.ಎಲ್. ಭಾಗ್ಯಲಕ್ಷ್ಮಿ, ಸ.ರಾ.ಆ. (ಗೈ) ಶ್ರೀಮತಿ ಮಾಧುರಿ ದೇವದರ್, ಜಿ.ಮು.ಆ. ಹಾಗೂ ಇತರ ಜಿಲ್ಲಾ ಪದಾಧಿಕಾರಿಗಳನ್ನು ಕಾಣಬಹುದು



ಏಪ್ರಿಲ್ 2ರಂದು ಬೆಳಗಾವಿ ಜಿಲ್ಲೆ ಗೋಕಾಕ್ ಸ್ಥಳೀಯ ಸಂಸ್ಥೆ ಆಶ್ರಯದಲ್ಲಿ ಜರುಗಿದ 'ಪಲ್ಸ್‌ಪೋಲಿಯೋ' ಜಾಥಾ ಕಾರ್ಯಕ್ರಮದಲ್ಲಿ ದಂಡಾಧಿಕಾರಿಗಳಾದ ಶ್ರೀ ಜಿ.ಎಸ್. ಮಳಗಿ, ಆರೋಗ್ಯಾಧಿಕಾರಿಗಳಾದ ಡಾ. ಆರ್.ಎಸ್. ಬೆಣಚಿಣಮರಡಿ, ವಲಯ ಅರಣ್ಯಾಧಿಕಾರಿ ಶ್ರೀ ಎಂ.ಕೆ. ಪಾತ್ರೂಟ, ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಜಿ.ಬಿ. ಬಳಿಗಾರ ಹಾಗೂ ಘೋಡಗೇರಿಯ ಶಿವಾನಂದ ಮಠದ ಸ್ವಾಮೀಜಿಗಳಾದ ಶ್ರೀ ಮಲ್ಲಿಕಾರ್ಜುನ ಸ್ವಾಮೀಜಿಯವರು ಮತ್ತು ಸ್ಕೌಟ್ಸ್-ಗೈಡ್ಸ್‌ಗಳು ಚಿತ್ರದಲ್ಲಿದ್ದಾರೆ.

Regd. as News Paper (Magazine) RNI No: 13348/1959. Postal Regd. No. KA/BGGPO/2580/2015-17
Licensed to Post Without Prepayment License WPP NO. 340, Date of Publishing 28th of Every Month
Posted at: Bengaluru PSO, Mysore Road, Bengaluru-26 on 28 or 30 every Month (No. of Pages: 04+32 = 36)



# "Save Water - Save Bengaluru" Awareness Campaign By Scouts, Guides, Rovers and Rangers in Association With BWSSB, Bengaluru





Addressed by Scouts and Guides on Save Water - Save Bengaluru Campaign





Affixing Stickers on AUTO -CAR - BMTC BUS


Awareness March


Be-Prepared for Campaign


Campaign at a Shop



If not delivered, please return to :
**THE EDITOR, Karnataka Scout & Guide**
State Headquarters, Shanthi Gruha
#39, Palace Road, Bengaluru - 560 001
Ph.: 080-22260017
e-mail.: shq@bsgkarnataka.org
editor@bsgkarnataka.org
www.bsgkarnataka.org

**Published by : The Bharat Scouts & Guides, Karnataka, State Headquarters**
**Shanthi Gruha,** #39, Palace Road, Bengaluru - 560 001. **Publisher & Editor : Siddaiah,** IAS (Retd.)
**Printed by : L. Lingappa, M.D. at Sathyasri Printers Pvt. Ltd.,** 16/1, 3rd Cross, 2nd Main, Kasturiba Nagar, Mysore Road, Bengaluru-26